ಶ್ರೀ

# ತರ್ಕ ಸಂಗ್ರಹಃ

(ಶ್ರೀ ವಾದಿರಾಜಾಚಾರ್ಯ ಕೃತ " ಬಾಲಬೋಧಿನೀ" ಕನ್ನಡ ವ್ಯಾಖ್ಯಾನ)



ಪ್ರಕಾಶಕರು :

ಶ್ರೀ ಹುಬ್ಬಳ್ಳಿ ವೆಂಕಣ್ಣಾಚಾರ್ಯ

ಬಳ್ಳಾರಿ



ಇಸ್ವಿ ೧೯೯೯ ಮೂಲ್ಯ [illegible]/- ರೂ.

ಶ್ರೀ

# ತರ್ಕ ಸಂಗ್ರಹಃ

(ಶ್ರೀವಾದಿರಾಜಾಚಾರ್ಯಕೃತ '' ಬಾಲಬೋಧಿನೀ'' ಕನ್ನಡವ್ಯಾಖ್ಯಾನ)

ಪ್ರಕಾಶಕರು :

**ಶ್ರೀ ಹುಬ್ಬಳ್ಳಿ ವೆಂಕಣ್ಣಾಚಾರ್ಯ**

ಬಳ್ಳಾರಿ



ಇಸ್ವಿ೧೯೯೯

ಮೂಲ್ಯ ೩೦/- ರೂ.



ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಉತ್ತರಾದಿಮಠ

ಶ್ರೀ

ಶ್ರೀದಿಗ್ವಿಜಯ ರಾಮೋವಿಜಯತೆ

ಶ್ರೀಮದ್‌ಜಗದ್ಗುರು ಮಧ್ವಾಚಾರ್ಯ ಮೂಲ ಸಂಸ್ಥಾನ

ಉತ್ತರಾದಿಮಠ

# ಅನುಗ್ರಹ ಸಂದೇಶ

ನ್ಯಾಯಶಾಸ್ತ್ರ ಅಧ್ಯಯನ ಮಾಡತಕ್ಕವರಿಗೆ ಪ್ರಥಮದಲ್ಲಿ ಅನ್ನಂಭಟ್ಟ ವಿರಚಿತ ತರ್ಕಸಂಗ್ರಹವು ಪರಮ ಪ್ರಯೋಜನಕಾರಿ ಆಗಿದೆ ಎಂಬುದು ವಿದ್ವಾಂಸರಿಗೆ ತಿಳಿದ ವಿಷಯವೇ ಆಗಿದೆ, ಈ ಗ್ರಂಥಕ್ಕೆ ಸಂಸ್ಕೃತದಲ್ಲಿ ಅನೇಕ ಟಿಪ್ಪಣಿಗಳು ಇದ್ದರೂ ಸಾಮಾನ್ಯ ಕಾವ್ಯ, ವ್ಯಾಕರಣಾದಿಗಳನ್ನು ಅಧ್ಯಯನ ಮಾಡಿದ ವಿಧ್ಯಾರ್ಥಿಗಳಿಗೆ ಆ ಟಿಪ್ಪಣಿಗಳು ಕಠಿಣವಾಗಿಯೇ ತೋರುತ್ತವೆ. ಈ ಕಾರಣದಿಂದ ಅಂಥ ವಿಧ್ಯಾರ್ಥಿಗಳಿಗೆ ತರ್ಕ ಸಂಗ್ರಹದ ಅಭಿಪ್ರಾಯವು ತಿಳಿಯುವಂತೆ ಮಾಡಲು ನಮ್ಮ ಶಿಷ್ಯರಾದ ಶ್ರೀ ವಾದಿರಾಜಾಚಾರ್ಯ ಅಗ್ನಿಹೋತ್ರಿ ಇವರು ಬಾಲ ಬೋಧಿನೀ ನಾಮಕ ಕನ್ನಡ ವ್ಯಾಖ್ಯಾನ ಸರಳವಾಗಿ ತಿಳಿಯುವಂತೆ ರಚಿಸಿದ್ದಾರೆ . ಆದರೆ ಪ್ರಥಮದಲ್ಲಿ ಗುರುಮುಖದಿಂದ ಅಧ್ಯಯನ ಮಾಡಿದನಂತರ ಸ್ವಯಮೇವ ಚಿಂತನೆ ಮಾಡಲು ಈ ವ್ಯಾಖ್ಯಾನವು ಬಹಳೇ ಉಪಯುಕ್ತವಾಗಿದೆ ಹಾಗೂ ವಿಧ್ಯಾರ್ಥಿಗಳಿಗೆ ಬಹಳ ಉಪಕಾರವು ಆಗಿದೆ ಎಂದು ನಾವು ಭಾವಿಸಿದ್ದೇವೆ. ಗ್ರಂಥಕರ್ತೃರಾದ ವಾದಿರಾಜಾಚಾರ್ಯರಿಗೆ ಆಯು ರಾರೋಗ್ಯ ಭಾಗ್ಯವನ್ನು ಹಾಗೂ ಉತ್ತಮ ಗ್ರಂಥ ನಿರ್ಮಾಣ ಮಾಡತಕ್ಕ ಶಕ್ತಿಯನ್ನು ದಯಪಾಲಿಸಲೆಂದು ನಮ್ಮ ಉಪಾಸ್ಯ ಮೂರ್ತಿ ಶ್ರೀ ದಿಗ್ವಿಜಯ ರಾಮ ದೇವರನ್ನು ಕುರಿತು ಪ್ರಾರ್ಥಿಸುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು

ದಿನಾಂಕ : ೧೩-೧೦-೧೯೯೯

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಶ್ರೀ ಮದುತ್ತರಾದಿ ಮಠ

ಮು|| ಗಯಾ

# ಸಮರ್ಪಣ

ಶ್ರೀ ಜಗದ್ಗುರು ಶ್ರೀ ೧೦೦೮ ಶ್ರೀ ಸತ್ಯಾತ್ಮ ತೀರ್ಥ ಶ್ರೀಪಾದಂಗಳವರು ನನ್ನ ಪ್ರಾರ್ಥನೆಯನ್ನು ಆಲಿಸಿ ಈ ಗ್ರಂಥಕ್ಕೆ ಅನುಗ್ರಹ ಸಂದೇಶ ಕೊಟ್ಟಿದ್ದಕ್ಕಾಗಿ ಶ್ರೀಪಾದಂಗಳವರ ಚರಣ ಕಮಲದಲ್ಲಿ ತರ್ಕ ಸಂಗ್ರಹ , ಬಾಲಬೋಧಿನೀ ನಾಮಕ ಗ್ರಂಥ ಪುಷ್ಪವನ್ನು ಸಮರ್ಪಿಸಿ ಅವರ ಕೃಪಾಶೀರ್ವಾದವನ್ನು ಪ್ರಾರ್ಥಿಸುತ್ತೇನೆ.

ಶ್ರೀ

ಶ್ರೀಜಗದ್ಗುರು ಮಧ್ವಾಚಾರ್ಯ ಸಂಸ್ಥಾನ

ಪಲಿಮಾರು ಮಠ, ಉಡುಪಿ.

# ಅನುಗ್ರಹ ಸಂದೇಶ

"ಕಾಣಾದಂ ಪಾಣಿನಿಯಂ ಚ ಸರ್ವ ಶಾಸ್ತ್ರೋಪಕಾರಕಂ" ಇದೊಂದು ಪ್ರಸಿದ್ಧವಾದ ನಾಣ್ಣುಡಿ. ತರ್ಕ ಶಾಸ್ತ್ರ ಹಾಗೂ ವ್ಯಾಕರಣ ಶಾಸ್ತ್ರಗಳ ಅಧ್ಯಯನ ನಡೆಸದೆ ಇದ್ದರೆ ಯಾವು ಶಾಸ್ತ್ರವೂ ಅರ್ಥವಾಗದು. ಖಂಡನತ್ರಯದಿಂದ ಪ್ರಾರಂಭಿಸಿ ಶ್ರೀ ನ್ಯಾಯಸುಧಾದ ತನಕದ ಪ್ರತಿಯೊಂದು ಟೀಕಾ - ಟಿಪ್ಪಣಿಗಳಲ್ಲಿ ಹಾಸು ಹೊಕ್ಕಾದ ಪಾರಭಾಷಿಕ ಪದ್ಧತಿಯನ್ನು ಅರ್ಥೈಸಿಕೊಳ್ಳಲು ತರ್ಕ ಶಾಸ್ತ್ರದ ಪಾತ್ರ ತರ್ಕಾತೀತ ಹಾಗಾಗಿ ಶ್ರೀ ಅನ್ನಂಭಟ್ಟರು ರಚಿಸಿದ ತರ್ಕ ಸಂಗ್ರಹ ಗ್ರಂಥವು ಶಾಸ್ತ್ರಕಾನನದಲ್ಲಿ ಪರ್ಯಟನ ಮಾಡುವ ಪಾಂಥನಿಗೆ ದಾರಿದೀವಿಗೆ. ಪ್ರತಿಯೊಬ್ಬನು ಅಧ್ಯಯನ ನಡೆಸಬೇಕಾದ ಅತ್ಯುಪಯುಕ್ತ ಪ್ರತಿ ಚಿಕ್ಕದಾದ ಚೊಕ್ಕದಾದ ಕೈಪಿಡಿ. ಬಾಲಕರಿಗೂ ಎಟಕುವ ಪಂಡಿತರಿಗೂ ತಲೆಕೆಡಿಸುವ ನಿಕಕ್ಷೋಪಲವಿದು. ಇದು ಉತ್ಪ್ರೇಕ್ಷೆಯಲ್ಲ, ಈ ವ್ಯಾಖ್ಯಾನವೆ ಇದಕ್ಕೆ ಸಾಕ್ಷಿ, ಅಗ್ನಿಹೋತ್ರಿ ಶ್ರೀ ವಾದಿರಾಜಾಚಾರ್ಯರು ಈ ಕನ್ನಡ ವ್ಯಾಖ್ಯಾನದ ಮೂಲಕ ತರ್ಕ ಸಂಗ್ರಹದ ಆಳಹರವನ್ನು ವಿವರಿಸಿದ್ದಾರೆ. ಕೇವಲ ಮಕ್ಷಿಕಾ-ಮಕ್ಷಿಕಾ ಭಾಷಾಂತರವಲ್ಲ ಇದು. ಕ್ಲಿಷ್ಟಪದಗಳ ವಿವರಣೆ, ವಿಗ್ರಹ ವಿರಚನೆ, ಹಿತ-ಮಿತ ತಾತ್ಪರ್ಯ ಸುಂದರ ಪರಿಷ್ಕಾರಗಳು ಪ್ರಶ್ನೋತ್ತರ ರೂಪದಲ್ಲಿ ಪಂಡಿತರೂ ಪರಾಮರ್ಶಿಸಬೇಕಾದ ಗೂಢವಾದ ಶಾಸ್ತ್ರಾರ್ಥ ವಿಮರ್ಶೆಗಳು. ಹೀಗೆ ಹತ್ತು ಹಲವಾರು ಮುಖದಿಂದ ಆಚಾರ್ಯರ ಈ ಅನುವಾದ ಸಾಗಿದೆ. ವಿದ್ವಾಂಸರಿಗೂ ವಿಧ್ಯಾರ್ಥಿಗಳಿಗೂ ಮನೋರಂಜಕವಾದ ಈ ಟಿಪ್ಪಣಿ ಸಹೃದಯ ಹೃದಯವನ್ನು ಗೆಲ್ಲ ಬಲ್ಲದು.

ಸುಂದರ ಸರಳ ಜೀವನದ ಶ್ರೀ ವಾದಿರಾಜಾಚಾರ್ಯರಿಗೆ ಪಾಠ ಪ್ರವಚನವೇ ಪವಿತ್ರ ಅಗ್ನಿಹೋತ್ರ. ಸದ್ಗುಣಗಳ ಶ್ರೀಮಂತಿಕೆ, ಪರವಿದ್ಯೆಯ ವಿನಯವಂತಿಕೆ. ಪಾಠ-ಪ್ರವಚನ ತಪಸ್ಸಿನ ಸಿರಿವಂತಿಕೆಯ ಮೂಲಕ ಜನರ -ಪೂರ್ಣಪ್ರಜ್ಞರ ಶ್ರೀ ಜನಾರ್ದನನ ಮನವನ್ನು ಗೆದ್ದಿದ್ದಾರೆ. ಈ ಇಳಿವಯಸ್ಸಿನಲ್ಲಿಯೂ ಇಂತಹ ಉತ್ತಮ ಅನುವಾದಗಳ ಮೂಲಕ ಆಚಾರ್ಯ ಮಧ್ವರ-ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದಾರೆ. ಅವರಿಂದ ಈ ರೀತಿಯ ಅನೇಕ ಸತ್ಕಾರ್ಯಗಳು ನಿರಂತರ ನಡೆಯುತ್ತಿರಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕಸಪ್ರೇಮನಾರಾಯಣ ಸ್ಮರಣೆಗಳು

ಮು॥ ಗುಲಬರ್ಗಾ — ಶ್ರೀ ಶ್ರೀ ವಿದ್ಯಾಧೀಶ ತೀರ್ಥರು

ದಿನಾಂಕ : ೧೯-೧೦-೯೯ — ಶ್ರೀ ಪಲೀಮಾರು ಮಠ, ಉಡುಪಿ



ಶ್ರೀ

# ಮುನ್ನುಡಿ

ಭಾರತದಲ್ಲಿ ಅನೇಕ ದಾರ್ಶನಿಕರಲ್ಲಿ ನ್ಯಾಯಶಾಸ್ತ್ರ ಪ್ರವರ್ತಕರಾದ ಗೌತಮಕಣಾದ ಮುನಿಗಳು ಈ ಮಹಾನುಭಾವರಿಂದ ಪ್ರಣೀತವಾದ ನ್ಯಾಯವೈಶೇಷಿಕ ಶಾಸ್ತ್ರದ ಮರ್ಮಜ್ಞಾನವು ಸುಲಭವಾಗಿ ಆಗಬೇಕೆಂಬ ಸದುದ್ದೇಶದಿಂದ ಆಂಧ್ರ ಪ್ರದೇಶದಲ್ಲಿ ಜನಿಸಿದ ಶ್ರೀ ಅನ್ನಂಭಟ್ಟರಿಂದ '' ತರ್ಕ ಸಂಗ್ರಹ '' ನಾಮಕ ಗ್ರಂಥವು ವಿರಚಿತವಾಗಿದೆ. ಈ ಗ್ರಂಥದಲ್ಲಿ ನ್ಯಾಯ ಶಾಸ್ತ್ರದ ಸಕಲ ತತ್ತ್ವ ನಿರೂಪಣೆಯು ಸಂಕ್ಷೆಪವಾಗಿ ಇರುವದರಿಂದ ವಿಧ್ಯಾರ್ಥಿಗಳಿಗೆ ಪ್ರಥಮ ಹಂತದಲ್ಲಿ ಈ ಗ್ರಂಥವು ಬಹಳ ಉಪಕಾರಿ ಆಗಿರುತ್ತದೆ. ತರ್ಕ ಸಂಗ್ರಹದ ಅರ್ಥ ಮಾಡಲು ಅನೇಕ ಟಿಪ್ಪಣಿಗಳು ಇದ್ದರೂ ಅವು ಸಾಮಾನ್ಯರಿಗೆ ಉಪಕಾರ ಮಾಡಲಾರವು ಕಠಿಣವಾಗಿಯೇ ತೋರುತ್ತವೆ ಎಂಬುದನ್ನು ತಿಳಿದು ಸಾಮಾನ್ಯವಾಗಿ ಕಾವ್ಯ, ವ್ಯಾಕರಣಾದಿಗಳನ್ನು ಓದಿ ನ್ಯಾಯ ಶಾಸ್ತ್ರದ ಅಧ್ಯಯನ ಮಾಡತಕ್ಕ ವಿಧ್ಯಾರ್ಥಿಗಳ ಸಲುವಾಗಿ ಈ ಗ್ರಂಥಕ್ಕೆ '' ಬಾಲ ಭೋದಿನೀ'' ಎಂಬ ಕನ್ನಡ ವ್ಯಾಖ್ಯಾನವನ್ನು ರಚಿಸಿದ್ದೇನೆ. ಇದರಲ್ಲಿ ಅರ್ಥವಿವರಣೆ, ಪದಗಳ ವಿಗ್ರಹ, ಅಭಿಪ್ರಾಯ ಸಂಗ್ರಹ ಇತ್ಯಾದಿ ವಿಷಯಗಳನ್ನು ವಿಚಾರ ಮಾಡಿದ್ದೇನೆ, ವಿಧ್ಯಾರ್ಥಿಗಳು ಪ್ರಥಮ ಹಂತದಲ್ಲಿ ಗುರುಮುಖದಿಂದ ತಿಳಿದಲ್ಲಿ ಸ್ವಯಮೇವ ಚಿಂತನೆ ಮಾಡಲು ಈ ನನ್ನ ಟಿಪ್ಪಣಿ ಸಹಾಯ ಮಾಡುತ್ತದೆ ಎಂದು ನಂಬಿದ್ದೇನೆ.

ಈ ಕನ್ನಡ ಅನುವಾದದಲ್ಲಿ ಏನಾದರೂ ದೋಷಗಳು ಕಂಡಲ್ಲಿ ಅದನ್ನು ವಿದ್ವಾಂಸರು ತಿಳಿಸಿದಲ್ಲಿ ಪುನಃ ಮುದ್ರಣ ಕಾರ್ಯದಲ್ಲಿ ಸರಿಪಡಿಸಿಕೊಳ್ಳಲಾಗುತ್ತದೆ.

ಈ ಗ್ರಂಥ ಪ್ರಿಂಟ್ ಮಾಡಲು ಧನ ಸಹಾಯ ಮಾಡಿದ ಶ್ರೀ ಹುಬ್ಬಳ್ಳಿ ವೆಂಕಣ್ಣಾಚಾರ್ಯ ಹಾಗೂ ಶ್ರೀ ಎನ್. ಕೇಶವ ಮೂರ್ತಿ ಇವರಿಗೆ ಶ್ರೀ ಹರಿ ಗುರುಗಳು ಆಯುರಾರೋಗ್ಯಾದಿಗಳನ್ನು ಕೊಡಲಿ ಎಂದು ಪ್ರಾರ್ಥಿಸುತ್ತೇನೆ ಹಾಗೂ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಮಾಣಿಕರಾವ್ ಪರಳಕರ ಇವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ ಹಾಗೂ ನಮ್ಮ ಶಿಷ್ಯ ಓಂಕಾರ ನಾರಾಯಣ ಇವನು ವಿಶೇಷಶ್ರಮವಹಿಸಿ ಮುದ್ರಣಕಾರ್ಯಕ್ಕೆ ಸಹಾಯ ಮಾಡಿದ್ದರಿಂದ ಅವನಿಗೆ ಆಶೀರ್ವಾದಗಳು.

ಪಂ. ವಾದಿರಾಜಾಚಾರ್ಯ ಅಗ್ನಿಹೋತ್ರಿ

**ಕೃತಜ್ಞತೆಗಳು**

ಶ್ರೀ ೧೦೦೮ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದಂಗಳವರು ಗ್ರಂಥ ಪರಿಶೀಲಿಸಿ ಅನುಗ್ರಹ ಸಂದೇಶ ದಯಪಾಲಿಸಿದಕ್ಕಾಗಿ ಅವರ ಚರಣಾರವಿಂದದಲ್ಲಿ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಶ್ರೀ

# ಅನುಕ್ರಮಣಿಕಾ

|| ಶ್ರೀ ಲಕ್ಷ್ಮೀ ನರಸಿಂಹ ಪ್ರಸೀದ ||

|| ಶ್ರೀ ಬಾದರಾಯಣ ಪ್ರಸೀದ ||

# ತರ್ಕ ಸಂಗ್ರಹಃ

(ಬಾಲಬೋಧಿನೀ ಕನ್ನಡ ವ್ಯಾಖ್ಯಾನ)

**ಮಂಗಲಾಚರಣ :-**

ಶ್ರೀ ನೃಸಿಂಹ ಪದಾಂಬೋಜಂ ಪ್ರಣಮ್ಯೇಷ್ಟಾರ್ಥದಂ ಸದಾ
ತರ್ಕ ಸಂಗ್ರಹ ವ್ಯಾಖ್ಯಾನಂ ಕುರ್ವೇಽಹಂ ಬಾಲಬೋಧಿನೀಂ

ಶ್ರೀಮದಾನಂದತೀರ್ಥಾರ್ಯಾನ್, ಜಯತೀರ್ಥ ಮುನಿನಪಿ
ಸತ್ಯ ಪ್ರಮೋದ ತೀರ್ಥಾರ್ಯಾನ್ ವಂದೇಽಹಂ ಸರ್ವಕಾಮದಾನ್

ಸರ್ವವಾದಿಜಯ ಶ್ರೇಷ್ಠಾನ್ ಸರ್ವಶಾಸ್ತ್ರ ವಿಶಾರದಾನ್
ಶ್ರೀ ಸತ್ಯಾತ್ಮತೀರ್ಥಾಖ್ಯಾನ್ ಗುರೂನ್ ವಂದೆ ನಿರಂತರಂ

ಸುಧಾಪ್ರವಚನಾಸಕ್ತಾನ್ ವಿಷ್ಣುಭಕ್ತಿಪರಾಯಣಾನ್
ಹುಚ್ಚಾಚಾರ್ಯಾನ್ ಗುರುನ್ ವಂದೆ ಸತ್ಯಧ್ಯಾನ ಪದಾರ್ಚಕಾನ್

**ತರ್ಕ ಸಂಗ್ರಹದ ಮಂಗಳಾಚರಣ :-**

ನಿಧಾಯ ಹೃದಿ ವಿಶ್ವೇಶಂ ವಿಧಾಯ ಗುರುವಂದನಂ ।
ಬಾಲಾನಾಂ ಸುಖಬೋಧಾಯ ಕ್ರಿಯತೇ ತರ್ಕ ಸಂಗ್ರಹಃ ।

**ಬಾಲಬೋಧಿನೀ ವ್ಯಾಖ್ಯಾನ :-**

ಅವತರಣಿಕಾ :- ಚಿಕೀರ್ಷಿತವಾದ ತರ್ಕ ಸಂಗ್ರಹ ಗ್ರಂಥ ರಚಿಸಲು ಇಚ್ಛೆಯುಳ್ಳ ಅನ್ನಂಭಟ್ಟರು- ನಿರ್ವಿಘ್ನಪರಿಸಮಾಪ್ತ್ಯರ್ಥವಾಗಿ ಇಷ್ಟದೇವತಾ ನಮಸ್ಕಾರಾತ್ಮಕ ಮಂಗಳವನ್ನು ಶಿಷ್ಟ ಶಿಕ್ಷಾರ್ಥವಾಗಿ ಗ್ರಂಥದ ಆದಿಭಾಗದಲ್ಲಿ ನಿಬಂಧನ ಮಾಡುತ್ತಾರೆ.

' ನಿಧಾಯೇತಿ '

**ಶ್ಲೋಕಾರ್ಥ :-** ವಿಶ್ವೇಶಂ - ಜಗತ್ಕಾರಣನಾದ ಈಶ್ವರನನ್ನು, ಹೃದಿ - ಮನಸ್ಸಿನಲ್ಲಿ ನಿಧಾಯ - ಅತಿಶಯವಾಗಿ (ಭಕ್ತಿಪೂರ್ವಕ) ಧ್ಯಾನ ಮಾಡಿ, ಗುರುವಂದನಂ- ವಿದ್ಯಾಗುರುಗಳಿಗೆ ನಮಸ್ಕಾರವನ್ನು ವಿಧಾಯ - ಮಾಡಿ, ಬಾಲಾನಾಂ- ಬಾಲಕರಿಗೆ, ಸುಖ ಬೋಧಾಯ -ಅನಾಯಾಸವಾಗಿ ಪದಾರ್ಥಜ್ಞಾನ ವಾಗಲು ತರ್ಕಸಂಗ್ರಹ - ತರ್ಕಸಂಗ್ರಹವೆಂಬ ಗ್ರಂಥವು (ಮಯಾ ಅನ್ನಂಭಟ್ಟರಿಂದ) ಕ್ರಿಯತೇ - ರಚಿಸಲ್ಪಡುತ್ತದೆ.

**ವಿವರಣೆ:-** ಮಂಗಲಂ ನಾಮ - ಸಮಾಪ್ತಿ ಪ್ರತಿಬಂಧಕ ಪಾಪ ವಿಶೇಷಧ್ವಂಸ ಕಾರಣತ್ವಂ ಅಂದರೆ - ಗ್ರಂಥಸಮಾಪ್ತಿಗೆ ಪ್ರತಿಬಂಧಕವಾದ ಪಾಪವಿಶೇಷಗಳ ಧ್ವಂಸಕ್ಕೆ ಕಾರಣವಾದದ್ದೇ ಮಂಗಲವು. ೧) ಬಾಲಾನಾಂ - ಇಲ್ಲಿ ಬಾಲಕರು ಎಂದರೆ ಯಾರು ವ್ಯಾಕರಣಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ನ್ಯಾಯಶಾಸ್ತ್ರವನ್ನು ಅಧ್ಯಯನ ಮಾಡಿಲ್ಲವೋ ಅವರೇ ಬಾಲಕರು, ಹೊರತು ಸ್ತನಪಾನ ಮಾಡತಕ್ಕ ಬಾಲಕರು ಅಲ್ಲವೆಂದು ತಿಳಿಯಬೇಕು. ಬಾಲಾನಾಂ ಎಂದರೆ ಇಂತಹ ಬಾಲಕರ ಸಲುವಾಗಿ ಎಂದರ್ಥ. ೨) ತರ್ಕ ಸಂಗ್ರಹ :- ಇಲ್ಲಿ ವಿಗ್ರಹವು 'ತರ್ಕ್ಯಂತೆ - ಯಥಾರ್ಥಜ್ಞಾನ ವಿಷಯೀಕ್ರಿಯಂತೆ ಇತಿ ತರ್ಕಾಃ (ತೇಷಾಂ) ತರ್ಕಾಣಾಂ ಸಂಗ್ರಹಃ'. 'ಸಂಕ್ಷೇಪೇಣ ಉದ್ದೇಶ, ಲಕ್ಷಣ, ಪರೀಕ್ಷಾ ಯಸ್ಮಿನ್ ಸಃ ತರ್ಕ ಸಂಗ್ರಹಃ' ಎಂದು ತಿಳಿಯಬೇಕು. ಅರ್ಥ :- ತರ್ಕಗಳು ಎಂದರೆ ಯಥಾರ್ಥಜ್ಞಾನಕ್ಕೆ ವಿಷಯಗಳಾದ ಪದಾರ್ಥಗಳು (ತೇಷಾಂ)- ಆ ಪದಾರ್ಥಗಳ ಸಂಗ್ರಹವೆಂದರೆ- ಉದ್ದೇಶ, ಲಕ್ಷಣ, ಪರೀಕ್ಷಾ ಇವುಗಳು, ಯಸ್ಮಿನ್ - ಯಾವ ಗ್ರಂಥದಲ್ಲಿ ಇರುತ್ತವೆಯೋ ಸಃ - ಆ ಗ್ರಂಥವು ತರ್ಕಸಂಗ್ರಹವು.

**ವಿವರಣೆ:-** ಇಲ್ಲಿ ೧) ಉದ್ದೇಶ ೨) ಲಕ್ಷಣ ೩) ಪರೀಕ್ಷಾ- ಇವುಗಳ ಅರ್ಥ.

೧) ಉದ್ದೇಶ :- ನಾಮಮಾತ್ರದಿಂದ ವಸ್ತು ಸಂಕೀರ್ತನವು ( ಹೆಸರಿನಿಂದ ಒಂದು ವಸ್ತುವನ್ನು ಹೇಳುವದು ) ಉದಾ :- ದ್ರವ್ಯ, ಗುಣ, ಕರ್ಮ ಹೀಗೆ ಹೇಳುವದು.

೨) ಲಕ್ಷಣ:- ಅಸಾಧಾರಣ ಧರ್ಮವು - ಒಂದು ವಸ್ತುವಿನಲ್ಲಿದ್ದ ಅಸಾಧಾರಣ ಧರ್ಮವು. ಉದಾ :- ಗಂಧವತ್ವವು ಪೃಥ್ವಿಯ ಲಕ್ಷಣವು, ಪೃಥ್ವಿಯಲ್ಲಿರತಕ್ಕ ಅಸಾಧಾರಣಧರ್ಮವೇ ಗಂಧವತ್ವವು. ಇದೇ ಪೃಥ್ವಿಯ ಲಕ್ಷಣವು ಪೃಥ್ವಿಯು ಲಕ್ಷ್ಯವಾಗಿದೆ.

೩) ಪರಿಕ್ಷಾ :- ಲಕ್ಷಿತಸ್ಯ ಲಕ್ಷಣಂ ಸಂಭವತಿ ನವಾ ಇತಿ **ವಿಚಾರ :- ಪರಿಕ್ಷಾ** ಅಂದರೆ ಯಾವುದಕ್ಕೆ ಲಕ್ಷಣವನ್ನು ಹೇಳಿರುತ್ತದೆಯೋ ಆ **ವಸ್ತುವಿಗೆ ಹೇಳಿದ ಲಕ್ಷಣವು** ಕೂಡುತ್ತದೆಯೋ ಇಲ್ಲವೋ ಎಂಬ ವಿಚಾರವೇ **ಪರಿಕ್ಷಾ** ಆಗಿದೆ.

೧) ಇಲ್ಲಿ ಉದ್ದೇಶಕ್ಕೆ ಪಕ್ಷಜ್ಞಾನವೇ ಫಲವು ೨) ಲಕ್ಷಣಕ್ಕೆ ಇತರ ಭೇಧ ಜ್ಞಾನವೇ ಫಲವು ೩) ಪರೀಕ್ಷೆಗೆ ಲಕ್ಷಣದೋಷಪರಿಹಾರವೇ ಫಲವಾಗಿದೆ . ಯಾವ ಲಕ್ಷಣಕ್ಕೆ ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವವೆಂಬ ದೋಷಗಳು ಇಲ್ಲವೋ ಅದುವೇ ಸಲ್ಲಕ್ಷಣವು. ಈ ಮೂರು ಲಕ್ಷಣ ದೋಷಗಳಲ್ಲಿ -

೧) ಅವ್ಯಾಪ್ತಿ ಎಂದರೆ:- " ಲಕ್ಷೈಕದೇಶಾವೃತ್ತಿತ್ವಂ" ಇದರ ಅರ್ಥ - ಲಕ್ಷಣವು ಲಕ್ಷ್ಯದ ಏಕದೇಶದಲ್ಲಿ ಇರದಿದ್ದರೆ ಲಕ್ಷಣವು ಅವ್ಯಾಪ್ತವಾಗುತ್ತದೆ. ಉದಾ : -ಕಪಿಲತ್ವವು ಗೋವಿನ ಲಕ್ಷಣವು ಎಂದು ಹೇಳಿದಲ್ಲಿ ಕಪಿಲತ್ವ ಲಕ್ಷಣವು ಅವ್ಯಾಪ್ತಿದೋಷ ಉಳ್ಳದ್ದಾಗುವದು. ಹೇಗೆಂದರೆ - ಲಕ್ಷ್ಯ ಎಂದರೆ ಸಕಲ ಗೋವುಗಳು ( ಬಿಳಿ, ಕೆಂಪು, ಮೊದಲಾದ ಗೋವುಗಳು) ಇವುಗಳಲ್ಲಿ ಲಕ್ಷ್ಯದ ಏಕದೇಶವೆಂದರೆ ಬಿಳಿಯ ಗೋವು ಇದರಲ್ಲಿ ಕಪಿಲತ್ವ ಬರದಿರುವದರಿಂದ ಕಪಿಲತ್ವದಲ್ಲಿ ಲಕ್ಷ್ಯೈಕ ದೇಶಾವೃತ್ತಿತ್ವವು ಬಂದಿತು. ಕಾರಣ ಕಪಿಲತ್ವ ಲಕ್ಷಣವು ಅವ್ಯಾಪ್ತವಾಗುತ್ತದೆ. (ಅವ್ಯಾಪ್ತಿ ಎಂಬ ದೋಷ ವುಳ್ಳದ್ದಾಗುತ್ತದೆ.) ಕಾರಣ ಕಪಿಲತ್ವವು ಗೋವಿನ ಲಕ್ಷಣವಾಗಲಾರದು.

೨) ಅತಿ ವ್ಯಾಪ್ತಿ ಎಂದರೆ :- " ಅಲಕ್ಷ್ಯಲಕ್ಷಣಸತ್ವಂ" ಗೋವಿಗೆ ಶೃಂಗಿತ್ವವೇ ಲಕ್ಷಣ ಎಂಬಲ್ಲಿ ಅತಿವ್ಯಾಪ್ತಿ ದೋಷಬರುತ್ತದೆ ಹೇಗೆಂದರೆ - ಲಕ್ಷ್ಯ-ಗೋವುಗಳು, ಅಲಕ್ಷ್ಯ- ಮಹಿಷ್ಯಾದಿಗಳು. ಈ ಮಹಿಷ್ಯಾದಿಗಳಲ್ಲಿ ಶೃಂಗಿತ್ವ ಬರುವದರಿಂದ ಆ ಶೃಂಗಿತ್ವ ಲಕ್ಷಣವು ಅತಿವ್ಯಾಪ್ತವಾಯಿತು.

೩) ಅಸಂಭವ:- " ಯಾವಲ್ಲಕ್ಷ್ಯಾವೃತ್ತಿತ್ವಂ"- ಲಕ್ಷಣವು ಯಾವ ಲಕ್ಷದಲ್ಲಿಯೂ ಬರದಿದ್ದರೆ ಆಗ ಲಕ್ಷಣವು ಅಸಂಭವಿವಾಗುತ್ತದೆ. ಉದಾ:- ಏಕಶಫತ್ವಂ - ಏಕಶಫತ್ವವು ಗೋವಿನ ಲಕ್ಷಣವೆಂದಲ್ಲಿ ಆಗ್ಗೆ ಯಾವಲ್ಲಕ್ಷ್ಯವಾದ ಗೋವಿನಲ್ಲಿ ಏಕಶಫತ್ವವು ( ಒಂದೇ ಗೊರಸು) ಇಲ್ಲವಾದ್ದರಿಂದ ಏಕಶಫತ್ವ ಲಕ್ಷಣವು ಅಸಂಭವಿಯಾಗುತ್ತದೆ. (ಗೋವಿನ ಪಾದಕ್ಕೆ ಎರಡು ಟೀಸಿಲುಗಳಿರುತ್ತವೆ. ಹೊರತು ಕುದರೆಯಂತೆ ಒಂದೇ ಗೋರಸು ಇರುವದಿಲ್ಲ) ಕಾರಣ (ಒಂದೇ ಗೊರಸು) ಏಕಶಫತ್ವ ಲಕ್ಷಣವು ಅಸಂಭವ ಎಂಬ ದೋಷವುಳ್ಳದ್ದಾಯಿತು. ಈ ಮೂರು ದೋಷಗಳಿಂದ ರಹಿತವಾದದ್ದೆ ಸಲ್ಲಕ್ಷಣವು.

**ತ.ಸ. :- ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯಾ ಭಾವಾಃ , ಸಪ್ತ ಪದಾರ್ಥಾಃ ।**

ಬಾ. ಬೋ :- ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವ ಇವು ಏಳೇ ಪದಾರ್ಥಗಳು. ಇಲ್ಲಿ ಸಪ್ತಗ್ರಹಣ ಮಾಡುವದರಿಂದ ಏಳಕ್ಕಿಂತ ಹೆಚ್ಚಾಗಲೀ ಕಡಿಮೆಯಾಗಲೀ ಪದಾರ್ಥಗಳು ಇಲ್ಲ. ಏಳೇ ಇರುತ್ತವೆ ಎಂದು ತಿಳಿಸಲು ಸಪ್ತಪದ ಗ್ರಹಣ ಮಾಡಿರುತ್ತಾರೆ. ವಿವರಣೆ :- ಪದಸ್ಯ ಅರ್ಥ ಅಭಿಧೇಯ :- ಪದಾರ್ಥ ಇತಿ ವ್ಯುತ್ಪತ್ತ್ಯಾ ಅಭಿಧೇಯತ್ವಂ ಪದಾರ್ಥ ಸಾಮಾನ್ಯ ಲಕ್ಷಣಂ, ತಥಾಚ ಅಭಿಧೇಯತ್ವವು ಪದಾರ್ಥದ ಸಾಮಾನ್ಯ ಲಕ್ಷಣವು ಎಂದಾಯಿತು ತಥಾಚ ಪದ ಪ್ರವೃತ್ತಿ ವಿಷಯತ್ವವೇ ಪದಾರ್ಥವು. ಪದಪ್ರವೃತ್ತಿ ಅಂದರೆ - ಶಕ್ತಿ, ಲಕ್ಷಣಾ ಎರಡು ಮುಂದೆ ಹೇಳಲಾಗುತ್ತದೆ.

ಈ ಶಕ್ತಿ ವಿಷಯದಲ್ಲಿ ಮಿಮಾಂಸಕರು ಹೀಗೆ ಶಂಕೆಮಾಡುತ್ತಾರೆ:- ಪ್ರಜ್ವಲಿಸತಕ್ಕ ವಹ್ನಿಯ ಸಮೀಪ ಮಣಿ ( ಚಂದ್ರಕಾಂತ ಮಣಿ) ಯನ್ನು ಇಟ್ಟಾಗ ವಹ್ನಿಯಲ್ಲಿದ್ದ ದಾಹಕ ಶಕ್ತಿ ( ಸುಡತಕ್ಕ ಶಕ್ತಿ) ಯು ನಾಶವಾಗುತ್ತದೆ ಆ ಮಣಿಯನ್ನು ಅಪಸರಣ ( ತೆಗೆಯಲಾಗಿ) ಮಾಡಿದಾಗ ವಹ್ನಿಯ ದಾಹಕ (ಸುಡುವ) ಶಕ್ತಿಯು ಪ್ರಕಟವಾಗುತ್ತದೆ. ಈ ಪ್ರಕ್ರಿಯೆದಿಂದ ಹೀಗೆ ಕಂಡುಬರುತ್ತದೆ. ವಹ್ನಿಯಲ್ಲಿ ದಾಹಕ್ಕೆ (ಸುಡಲಿಕ್ಕೆ) ಕಾರಣವಾದ ಶಕ್ತಿ ಇದೆ ಎಂದು ಕಂಡುಬರುತ್ತದೆ. ಈ ಶಕ್ತಿಯು ಸಪ್ತಪದಾರ್ಥದಿಂದ ಅತಿರಿಕ್ತವಾದ್ದರಿಂದ ಶಕ್ತಿ ಎಂಬ ಎಂಟನೇ ಪದಾರ್ಥ ಇರುವದರಿಂದ ಪದಾರ್ಥಗಳು ಏಳೇ ಇರುತ್ತವೆ ಎಂದು ಹೇಳಿದ್ದು ಅಯುಕ್ತವು ಎಂದು ಶಂಕೆ ಮಾಡಿದಲ್ಲಿ ಇದಕ್ಕೆ ತಾರ್ಕಿಕರ ಸಮಾಧಾನ ಹೀಗೆ ಇರುತ್ತದೆ:- ವಹ್ನಿಯಲ್ಲಿದ್ದ ಶಕ್ತಿಯು, ದಾಹಕ್ಕೆ ಕಾರಣವಾದ ಮಣಿಯ ಅಭಾವದಿಂದ ಬರುತ್ತದೆ ಆದಕಾರಣ ಮಣಿಯ ಸಾಮಾನ್ಯಾಭಾವವೇ ವಹ್ನಿಯ ದಾಹವನ್ನು ಕುರಿತು ಕಾರಣ ಹೊರತು, ಅಭಾವಾತಿರಿಕ್ತ ಶಕ್ತಿ ಎಂಬ ಪದಾರ್ಥ ಇಲ್ಲವಾದ್ದರಿಂದ ಪದಾರ್ಥಗಳು ಏಳೇ ಇರುತ್ತವೆ ಎಂದು ತಿಳಿಯಬೇಕು.

ಸಪ್ತ ಪದಾರ್ಥಗಳಲ್ಲಿ ಒಂದನೆಯದಾದ ದ್ರವ್ಯ ವಿಭಾಗ ಮಾಡಲಾಗುತ್ತದೆ.

**ತ.ಸ :- ತತ್ರ ದ್ರವ್ಯಾಣಿ - ಪೃಥಿವ್ಯಪ್ತೇಜೋ ವಾಯ್ವಾಕಾಶ ಕಾಲ ದಿಗಾತ್ಮ ಮನಾಂಸಿ ನವೈವ ।**

ಬಾ. ಬೋ :- ಪೃಥಿವೀ, ಆಪ್ (ನೀರು), ತೇಜೋ ( ಅಗ್ನಿ), ವಾಯು, ಆಕಾಶ, ಕಾಲ, ದಿಕ್ಕು, ಆತ್ಮ, ಮನಸ್ಸು, - ಹೀಗೆ ದ್ರವ್ಯಗಳು ಒಂಬತ್ತು ಇರುತ್ತವೆ. ಇದಕ್ಕೆ ಹೆಚ್ಚೂ ಇಲ್ಲ ಕಡಿಮೆಯೂ ಇಲ್ಲ. ದ್ರವ್ಯದ ಲಕ್ಷಣವೇನೆಂದರೆ '' ದ್ರವ್ಯತ್ವ ಜಾತಿಮತ್ತ್ವಂ ಗುಣವತ್ತ್ವಂ ಕ್ರಿಯಾಶ್ರಯತ್ವಂ ವಾ ಸಮವಾಯಿಕಾರಣತ್ವಂ '' ಇದೇ ದ್ರವ್ಯದ ಲಕ್ಷಣವು. ಅಂದರೆ

ದ್ರವ್ಯದಲ್ಲಿ ದ್ರವ್ಯತ್ವಜಾತಿ(ಧರ್ಮ) ಇರುತ್ತದೆ. ಹಾಗೂ ಗುಣವತ್ವಂ ರೂಪಾದಿಗುಣವುಳ್ಳದ್ದು ಆಗಿದೆ. ಕ್ರಿಯೆ ಉಳ್ಳದ್ದೂ ಮತ್ತು ಸಮವಾಯಿಕಾರಣವೂ ಆಗಿದೆ. ಕಾರಣ ಅದು ದ್ರವ್ಯವು ದ್ರವ್ಯದ ಲಕ್ಷಣದ ವಿವರಣೆ:- ಕ್ರಿಯಾಶ್ರಯತ್ವಂ ದ್ರವ್ಯತ್ವಂ( ಅಂದರೆ ಕ್ರಿಯಾಕ್ಕೆ ಆಶ್ರಯವಾದದ್ದೆ ದ್ರವ್ಯವು) ಹೀಗೆ ದ್ರವ್ಯದ ಲಕ್ಷಣ ಹೇಳಿ ಈ ದ್ರವ್ಯಗಳು ಒಂಬತ್ತೇ ಹೊರತು ಹತ್ತನೇ ದ್ರವ್ಯವು ಇಲ್ಲವೆಂದು ತಾರ್ಕಿಕರು ಹೇಳುತ್ತಾರೆ. ಆದರೆ ಮಿಮಾಂಸಕರು:- "ನೀಲಂ ತಮಶ್ಚಲತಿ" ಕಪ್ಪಾದ ಕತ್ತಲೆಯು ಚಲಿಸುತ್ತದೆ ಎಂಬ ಪ್ರತೀತಿಯು ಇರುತ್ತದೆ. ಇಲ್ಲಿ ಕತ್ತಲೆ ತಮಸ್ಸನಲ್ಲಿ - ನೀಲರೂಪಗುಣವು ಹಾಗೂ ಚಲನ ರೂಪ ಕ್ರಿಯೆಯು ತೋರುತ್ತದೆ. ಆದಕಾರಣ ದ್ರವ್ಯದ ಲಕ್ಷಣವಾದ ಗುಣಕ್ರಿಯಾಶ್ರಯತ್ವವು ತಮಸ್ಸಿಗೆ ಬರುವದರಿಂದ ತಮಸ್ಸು( ಕತ್ತಲೆಯು) ಸಹ ಹತ್ತನೆ ದ್ರವ್ಯವಾಯಿತು ಆದ್ದರಿಂದ ಒಂಬತ್ತು ದ್ರವ್ಯವೆಂದು ಹೇಳಿದ್ದು ಅಯುಕ್ತವು ಎಂಬ ಶಂಕಾ ಸರಿಯಲ್ಲವೆಂದು ತಾರ್ಕಿಕರು ಹೇಳುತ್ತಾರೆ. ಆದರೆ ತಮಸ್ಸು( ಅಂಧಕಾರವು) ಚಲಿಸುತ್ತದೆ ಎಂಬ ಪ್ರತೀತಿಯು (ಜ್ಞಾನವು) ಭ್ರಮವು (ಪ್ರಮಾ ಅಲ್ಲ) ಯಾಕೆಂದರೆ - ಯಾವಾಗ ದೀಪ ಚಲುಸುತ್ತದೆ ಆವಾಗಲೆ ತಮಸ್ಸು ಚಲಿಸುತ್ತದೆ ಎಂಬ ಭ್ರಮವು ಬರುತ್ತದೆ. ವಾಸ್ತವಿಕವಾಗಿ ತಮಸ್ಸು(ಕತ್ತಲೆ) ಚಲಿಸುವದಿಲ್ಲ ದೀಪದ ಚಲನೆಯು ತಮಸ್ಸಿನಲ್ಲಿ ತೋರುತ್ತದೆ ಅದಕ್ಕೆ ಸ್ವತಃ ಚಲನೆಯಿಲ್ಲ ಕಾರಣ ಕ್ರಿಯಾಶ್ರಯತ್ವ ಲಕ್ಷಣ ತಮಸ್ಸಿಗೆ ಬರಲಿಲ್ಲ ಕಾರಣ ಅದು ದ್ರವ್ಯವೇ ಅಲ್ಲ ಹಾಗು ತಮಸ್ಸನ್ನು ತೇಜೋಭಾವದಲ್ಲಿ ಅಂತರ್ಭಾವ ಮಾಡುವದರಿಂದ ತಮಸ್ಸು ಎಂಬ ಪ್ರತ್ಯೇಕ ಪದಾರ್ಥವೇ ಇಲ್ಲವಾದ್ದರಿಂದ ಹತ್ತನೇ ದ್ರವ್ಯವು ಇರುವದಿಲ್ಲ ಕಾರಣ ಒಂಬತ್ತೇ ದ್ರವ್ಯಗಳು ಎಂದು ತಿಳಿಯಬೇಕು.

ಎರಡನೇಯದಾದ ಗುಣ ವಿಭಾಗ ಮಾಡುತ್ತಾರೆ.

**ತ.ಸ.:-ರೂಪ ರಸಗಂಧಸ್ಪರ್ಶ ಸಂಖ್ಯಾ ಪರಿಮಾಣ ಪೃಥಕ್ತ್ವ ಸಂಯೋಗ ವಿಭಾಗ ಪರತ್ವಾಪರತ್ವ ಗುರುತ್ವ ದ್ರವತ್ವ ಸ್ನೇಹ ಶಬ್ದ ಬುದ್ಧಿ ಸುಖ ದುಃಖೇಚ್ಛಾ ದ್ವೇಷ ಪ್ರಯತ್ನ ಧರ್ಮಾಧರ್ಮ ಸಂಸ್ಕಾರಾಶ್ಚತುರ್ವಿಂಶತಿ ಗುಣಾಃ।**

ಬಾ. ಬೋ:- ರೂಪವನ್ನಾರಂಭಿಸಿ ಸಂಸ್ಕಾರ ಪರ್ಯಂತ ಇಪ್ಪತ್ನಾಲ್ಕು ಗುಣಗಳು ಗುಣದ ಲಕ್ಷಣ:- ದ್ರವ್ಯ ಕರ್ಮ ಭಿನ್ನತ್ವೇ ಸತಿ ಸಾಮಾನ್ಯವತ್ವಂ ಗುಣಸ್ಯ ಲಕ್ಷಣಂ.
ವಿವರಣೆ : -ದ್ರವ್ಯಗಳು ಹಾಗು ಕರ್ಮ ಇವುಗಳಿಂದ ಭಿನ್ನವಾಗಿ ಸಾಮಾನ್ಯ ಜಾತಿ

ಧರ್ಮವುಳ್ಳದ್ದೇ ಗುಣವು. ಗುಣದಲ್ಲಿ ಗುಣತ್ವಜಾತಿ ಇದೆ. ಸಾಮಾನ್ಯವತ್ವವೂ ಬಂದಿತು. ಹಾಗೂ ಈ ಗುಣವು ಒಂಬತ್ತು ದ್ರವ್ಯಗಳಿಂದ ಮತ್ತು ಐದು ಕರ್ಮಗಳಿಂದ ಭಿನ್ನವಾಗಿದೆ. ಕಾರಣ ದ್ರವ್ಯ ಕರ್ಮ ಭಿನ್ನತ್ವದಿಂದ ಕೂಡಿದೆ ಹಾಗೂ ಗುಣತ್ವ ಬರುವದಿಂದ ಗುಣದಲ್ಲಿ ಲಕ್ಷಣ ಸಮನ್ವಯವಾಗುತ್ತದೆ. ಇಪ್ಪತ್ನಾಲ್ಕು ಗುಣಗಳು ಸಮವಾಯ ಸಂಬಂಧದಿಂದ ದ್ರವ್ಯವನ್ನು ಆಶ್ರಯಿಸಿರುತ್ತವೆ.

ಮೂರನೆಯದಾದ ಕರ್ಮವಿಭಾಗ ಮಾಡುತ್ತಾರೆ.

**ತ.ಸ.:- ಉತ್ಕ್ಷೇಪಣಾ ಪಕ್ಷೇಪಣಾಕುಂಚನ ಪ್ರಸಾರಣ ಗಮನಾನಿ ಪಂಚ ಕರ್ಮಾಣಿ ।**

ಬಾ.ಬೋ.:- ಉತ್ಕ್ಷೇಪಣ - ಮೇಲೆ ಒಗೆಯುವದು, ಅಪಕ್ಷೇಪಣ- ಕೆಳಗೆ ಒಗೆಯುವದು, ಆಕುಂಚನ - ಸಂಕೋಚ ಹೊಂದುವದು, ಪ್ರಸಾರಣ - ವಿಸ್ತಾರ ವಾಗುವದು, ಗಮನ- ಹೋಗುವದು , ಇವೇ ಐದು ಕರ್ಮಗಳು .
ಕರ್ಮಲಕ್ಷಣ :- ಸಂಯೋಗ ಭಿನ್ನತ್ವೇ ಸತಿ ಸಂಯೋಗಾಸಮವಾಯಿಕಾರಣತ್ವಂ.
ವಿವರಣೆ:- ಸಂಯೋಗದಿಂದ ಭಿನ್ನವಾಗಿ ಸಂಯೋಗಕ್ಕೆ ಅಸಮವಾಯಿ ಕಾರಣವಾದದ್ದೇ ಕರ್ಮವು ( ಸಮವಾಯಿ ಅಸಮವಾಯಿ ಕಾರಣ ವಿಚಾರ ಮುಂದೆ ಮಾಡಲಾಗುವದು ) ಈ ಕರ್ಮಗಳು ಐದೇ ಹೊರತು ಹೆಚ್ಚು ಕಡಿಮೆ ಇರುವದಿಲ್ಲ. ಭ್ರಮಣ ಮೊದಲಾದ ಕರ್ಮಗಳು ಗಮನದಲ್ಲಿ ಅತಂರ್ಭಾವ ಹೊಂದುತ್ತವೆ.

ನಾಲ್ಕನೆಯದಾದ ಸಾಮಾನ್ಯವನ್ನು ವಿಭಾಗಿಸುತ್ತಾರೆ.

**ತ.ಸ.:- ಪರಮಪರಂಚೇತಿ ದ್ವಿವಿಧಂ ಸಾಮಾನ್ಯಂ**

ಬಾ.ಬೋ.:- ಪರಸಾಮಾನ್ಯ ಅಪರಸಾಮಾನ್ಯವೆಂದು ಸಾಮಾನ್ಯವು ಎರಡು ವಿಧವಾಗಿರುತ್ತದೆ. ಸಾಮಾನ್ಯ ಲಕ್ಷಣ:- ಅನುವೃತ್ತಿ ಪ್ರತ್ಯಯ ಹೇತುಭೂತೋ ಧರ್ಮಃ ಸಾಮಾನ್ಯಂ ವಿವರಣೆ:- ಅನುವೃತ್ತಿಪ್ರತ್ಯಯ - ಅಂದರೆ ಅಯಂ ಗೌಃ ಅಯಂ ಗೌಃ ಇತ್ಯಕಾರಕ ಸಮಾನಪ್ರತ್ಯಯೊ ಭವತಿ (ತಸ್ಯ ಹೇತುಃ) ಈ ಪ್ರತ್ಯಯಕ್ಕ ಹೇತು ಭೂತ ದರ್ಮ ಗೋತ್ವಂ, ಈ ಗೋತ್ವವೇ ಸಾಮಾನ್ಯವು ಜಾತಿ ಎಂದು ಕರೆಯಲ್ಪಡುತ್ತದೆ. ಅರ್ಥಾತ್ - ಅನೇಕ ವ್ಯಕ್ತಿಗಳಲ್ಲಿ (ಗೋವುಗಳಲ್ಲಿ) ಅನುಗತವಾದ ಗೋತ್ವಧರ್ಮವೇ

ಸಾಮಾನ್ಯ ಎಂದು ತಿಳಿಯಬೇಕು. ಒಂದೇ ವ್ಯಕ್ತಿಯಲ್ಲಿರುವ ಧರ್ಮವು ಸಾಮಾನ್ಯವಾಗಲಾರದು (ಉದಾ:- ಆಕಾಶ, ಇದು ಒಂದೇ ವ್ಯಕ್ತಿ ಆಗಿದೆ. ಇದರಲ್ಲಿ ಆಕಾಶತ್ವಧರ್ಮವು ಸಾಮಾನ್ಯವಾಗಲಾರದು.) ಈ ಸಾಮಾನ್ಯವು ಎರಡು ವಿಧ :- ೧) ಪರಸಾಮಾನ್ಯ ಮತ್ತು ೨) ಅಪರಸಾಮಾನ್ಯ.

ವಿವರಣೆ: - ಯಾವ ಧರ್ಮವು ಅಧಿಕದೇಶ ವೃತ್ತಿಯಾಗಿದೆಯೋ ಅದು ಪರಸಾಮಾನ್ಯ. ಯಾವ ಧರ್ಮವು ನ್ಯೂನ (ಕಡಿಮೆ) ದೇಶ ವೃತ್ತಿ ಆಗಿದೆಯೋ ಅದು ಅಪರ ಸಾಮಾನ್ಯವು. ಪರಸಾಮಾನ್ಯಕ್ಕೆ ಉದಾ:- ದ್ರವ್ಯ, ಗುಣ, ಕರ್ಮ ಈ ಮೂರರಲ್ಲಿ ಸತ್ತಾ (ಇರುವಿಕೆ) ಧರ್ಮ ಇದೆ. ಆದಕಾರಣ ಸತ್ತಾಧರ್ಮವು ಪರಸಾಮಾನ್ಯವಾಗುತ್ತದೆ. (ಅಧಿಕಪದಾರ್ಥಗಳಲ್ಲಿ ಇರುವದರಿಂದ)

ಘಟದಲ್ಲಿ ಘಟತ್ವಜಾತಿಯ ಅಪರಸಾಮಾನ್ಯವು (ಘಟದಲ್ಲಿ ಮಾತ್ರ ಇರುತ್ತದೆ ಆದ ಕಾರಣ) ದ್ರವ್ಯತ್ವವು ಒಂಬತ್ತು ದ್ರವ್ಯಗಳಲ್ಲಿದ್ದ ಕಾರಣ ಪರಸಾಮಾನ್ಯವು, ಆಗ ಘಟತ್ವವು ಅಪರಸಾಮಾನ್ಯವಾಗುತ್ತದೆ. ದ್ರವ್ಯತ್ವವು ಒಂಬತ್ತು ದ್ರವ್ಯಗಳಲ್ಲಿದ್ದು ಅಧಿಕದೇಶ ವೃತ್ತಿಯಾದ್ದರಿಂದ ಪರಸಾಮಾನ್ಯವು ಘಟತ್ವವು ಘಟದಲ್ಲಿ ದ್ರವ್ಯದ ಏಕದೇಶ ಪೃಥಿವೀ ಭಾಗದಲ್ಲಿ ಮಾತ್ರ ಇರುವದರಿಂದ, ಈ ಘಟತ್ವವು ನ್ಯೂನ ದೇಶವೃತ್ತಿಯಾದ ಕಾರಣ ಅಪರಸಾಮಾನ್ಯವಾಗುತ್ತದೆ. ದ್ರವ್ಯತ್ವದಿಂದಲೂ ಸತ್ತಾಜಾತಿಯು ಅಧಿಕದೇಶವೃತ್ತಿ ಯಾದ್ದರಿಂದ ದ್ರವ್ಯತ್ವಕ್ಕೆ ಸತ್ತಾಜಾತಿಯು ಪರಸಾಮಾನ್ಯವಾಗುತ್ತದೆ. ಸತ್ತಾಜಾತಿಗಿಂತ ಕಡಿಮೆ ದೇಶದಲ್ಲಿರುವ ದ್ರವ್ಯತ್ವವು ಅಪರಸಾಮಾನ್ಯವಾಗುತ್ತದೆ. ಹೀಗೆ ಪರಸಾಮಾನ್ಯ ಅಪರಸಾಮಾನ್ಯ ಲಕ್ಷಣವನ್ನು ತಿಳಿದುಕೊಳ್ಳಬೇಕು.

ತ.ಸ. :- ನಿತ್ಯ ದ್ರವ್ಯ ವೃತ್ತಿಯೋ ವಿಶೇಷಾಸ್ತ್ವನಂತಾ ಏವ ।

ಬಾ.ಬೋ.:- ನಿತ್ಯದ್ರವ್ಯಗಳೆಂದರೆ ಪೃಥಿವೀ, ಜಲ, ತೇಜ, ವಾಯು, ಈ ನಾಲ್ಕು ದ್ರವ್ಯಗಳ ಪರಮಾಣುಗಳು ಹಾಗೂ ಆಕಾಶ, ಕಾಲ, ದಿಕ್ಕು, ಆತ್ಮಾ, ಮನಸ್ಸು - ಇವೆಲ್ಲವೂ ನಿತ್ಯದ್ರವ್ಯಗಳು. 'ನಿತ್ಯದ್ರವ್ಯವೃತ್ತಯಃ' ಎಂಬಲ್ಲಿ ವಿಗ್ರಹವು - ನಿತ್ಯದ್ರವ್ಯೇಷು ವೃತ್ತಿಃ ಯೇಷಾಂ ತೇ ನಿತ್ಯದ್ರವ್ಯವೃತ್ತಯಃ ಪೂರ್ವೋಕ್ತ ನಿತ್ಯದ್ರವ್ಯಗಳಲ್ಲಿ ಇರತಕ್ಕವುಗಳು. ಈ ವಿಶೇಷಗಳು ಪ್ರತಿವ್ಯಕ್ತಿಯಲ್ಲಿ ಭಿನ್ನವಾಗಿ ಹಾಗೂ ಅಸಂಖ್ಯವಾಗಿರುತ್ತವೆ.

ವಿವರಣೆ:- ಘಟಾದಿಗಳು ಅನಿತ್ಯದ್ರವ್ಯಗಳು ಹಾಗೂ ಅವಯವವುಳ್ಳವುಗಳಾದ್ದರಿಂದ ಪರಸ್ಪರವಾಗಿ ಭಿನ್ನವಾಗಿರುತ್ತವೆ. (ಭೇದವುಳ್ಳವುಗಳಾಗಿರುತ್ತವೆ) ಅಲ್ಲಿ ಭೇದವು

ತೋರುತ್ತದೆ ಆದರೆ ನಿತ್ಯದ್ರವ್ಯಗಳಾದ ಪರಮಾಣುಗಳು ಅವಯವರಹಿತವಾದ್ದರಿಂದ ಅವಯವ ಅವಯವಿ ನಿಮಿತ್ತ ಪರಸ್ಪರ ಪರಮಾಣುಗಳಿಗೆ ( ಜಲಪರಮಾಣು, ಪೃಥಿವೀ ಪರಮಾಣುಗಳಿಗೆ ಭೇದವು ಇದ್ದರೂ ತೋರುವುದಿಲ್ಲ. ಈ ಪರಮಾಣುಗಳಲ್ಲಿ ಇದ್ದ ಭೇದವನ್ನು ತಿಳಿಸಿಕೊಡತಕ್ಕವುಗಳೇ ವಿಶೇಷಗಳು. ಈ ವಿಶೇಷಗಳು ಅನಂತವಾಗಿರುತ್ತವೆ. ವ್ಯಕ್ತಿಗಳು ಅನಂತವಾದ್ದರಿಂದ ವಿಶೇಷಗಳು ಅಸಂಖ್ಯವಾಗಿಯೇ ಇರುತ್ತವೆ. ವಿಶೇಷ ಎಂಬಲ್ಲಿ ವಿಗ್ರಹ :- ವಿಶೇಷಯಂತಿ ವ್ಯಾವರ್ತಯಂತಿ ಇತಿ ವಿಶೇಷಾಃ ವ್ಯಾವರ್ತಕಾಃ (ಭೇದಜನಕಾಃ) ಅಂದರೆ ನಿತ್ಯವಾದ ಅವಯವ ರಹಿತವಾದ ಪರಮಾಣುಗಳಲ್ಲಿ ( ಜಲ ಪೃಥಿವೀ ಪರಮಾಣುಗಳಲ್ಲಿ ಪರಸ್ಪರವಾಗಿ ಭೇದ ಬುದ್ಧಿಯನ್ನು ತಂದುಕೊಡತಕ್ಕವುಗಳೇ ವಿಶೇಷಗಳು ಈ ವಿಶೇಷಗಳು ಸ್ವತೋ ವ್ಯಾವರ್ತಕಗಳು) ತಮ್ಮಲ್ಲಿ ಭೇದವನ್ನು ತಾವೇ ನಿರ್ವಹಿಸತಕ್ಕವುಗಳು.

**ತ.ಸ. :- ಸಮವಾಯಸ್ತು ಏಕ ಏವ ।**

ಬಾ. ಬೋ :- ಸಮವಾಯವನ್ನು ನಿರೂಪಿಸುತ್ತಾರೆ. ಸಮವಾಯವು ಒಂದೇ ಇರುತ್ತವೆ. ವಿವರಣೆ :- ಸಮವಾಯ ಎಂಬಲ್ಲಿ ವಿಗ್ರಹ - ಸಮವೇತಿ , ನಿತ್ಯಂ ಸಂಬಧ್ನಾತೀತಿ ಸಮವಾಯಃ ನಿತ್ಯ ಸಂಬಂಧವೇ ಸಮವಾಯವು. ಇದಕ್ಕೆ ಉದಾ : -ಘಟ ಹಾಗೂ ರೂಪವು ಒಂದನ್ನೊಂದು ಬಿಟ್ಟು ಇರಲಾರವು. ಅವುಗಳಿಗೆ ನಿತ್ಯಸಂಬಂಧವಿದೆ. ಈ ನಿತ್ಯ ಸಂಬಂಧಕ್ಕೆ ಸಮವಾಯವೆಂದು ಕರೆಯಬೇಕು.

**ತ.ಸಂ. :- ಅಭಾವಶ್ಚತುರ್ವಿಧಃ :- ಪ್ರಾಗಭಾವಃ ಪ್ರಧ್ವಂಸಾಭಾವೋऽತ್ಯಂತಾಭಾವೋऽನ್ಯೋऽನ್ಯಾಭಾವಶ್ಚೇತಿ ।**

ಬಾ. ಬೋ:- ಉಕ್ತಪ್ರಕಾರ ನಾಲ್ಕು ವಿಧ ಅಭಾವಗಳು ಇರುತ್ತವೆ. ಪ್ರಾಗಭಾವಃ ಪ್ರಧ್ವಂಸಾಭಾವಃ ಅತ್ಯಂತಾಭಾವಃ ಮತ್ತು ಅನ್ಯೋನ್ಯಾಭಾವಃ ಅಭಾವದ ಸಾಮಾನ್ಯ ಲಕ್ಷಣ :- ನಞಶಬ್ದಜನ್ಯ ಪ್ರತೀತಿ ವಿಷಯತ್ವಂ ಅಭಾವತ್ವಂ. ಅಂದರೆ :- ಘಟೋ ನಾಸ್ತಿ, ಪಟೋ ನಾಸ್ತಿ (ಘಟವಿಲ್ಲ, ಪಟವಿಲ್ಲ) ಹೀಗೆ ನಞ ಶಬ್ದ (ಇಲ್ಲವೆಂಬ ಶಬ್ದ) ಪ್ರತೀತಿ ; ನಞಶಬ್ದದಿಂದ ಹುಟ್ಟಿದಜ್ಞಾನ (ಘಟವಿಲ್ಲವೆಂಬ ಜ್ಞಾನ) ಈ ಜ್ಞಾನಕ್ಕೆ ವಿಷಯವಾದದ್ದೇ ಅಭಾವವು. ಇವುಗಳ ವಿಚಾರ ಮುಂದೆ ಹೇಳಲಾಗುತ್ತದೆ.

ಕ್ರಮಪ್ರಾಪ್ತವಾದ ಪೃಥಿವೀ ಲಕ್ಷಣ ಹೇಳುತ್ತಾರೆ.

**ತ.ಸಂ.:- ಗಂಧವತೀ ಪೃಥಿವೀ । ಸಾ ದ್ವಿವಿಧಾ । ನಿತ್ಯಾಽನಿತ್ಯಾಚ । ನಿತ್ಯಾ ಪರಮಾಣುರೂಪಾ। ಅನಿತ್ಯಾ ಕಾರ್ಯರೂಪಾ । ಸಾ ಪುನಸ್ತ್ರಿವಿಧಾ । ಶರೀರೇಂದ್ರಿಯವಿಷಯಭೇದಾತ್ । ಶರೀರಂ ಅಸ್ಮದಾದೀನಾಂ । ಇಂದ್ರಿಯಂ ಗಂಧಗ್ರಾಹಕಂ ಘ್ರಾಣಂ ನಾಸಾಗ್ರವರ್ತಿ । ವಿಷಯೋ ಮೃತ್‌ಪಾಷಾಣಾದಿ ।**

ಬಾ.ಬೋ.:- ಗಂಧವತೀ - ಗಂಧವುಳ್ಳದ್ದು ಪೃಥಿವೀಯು - ಗಂಧವತ್ತ್ವವೇ ಪೃಥಿವಿಯ ಲಕ್ಷಣವು . ವಿವರಣೆ :- ಗಂಧವತೀ ಎಂಬಲ್ಲಿ ವಿಗ್ರಹ - ಗಂಧಃ ಅಸ್ಯಾಂ ಅಸ್ತೀತಿ ಗಂಧವತೀ ಗಂಧವು ಈ ಪೃಥಿವಿಯಲ್ಲಿ ಇರುತ್ತದೆ. ಕಾರಣ ಪೃಥಿವಿಯು ಗಂಧವುಳ್ಳದ್ದು ಗಂಧವುತ್ತ್ವವು ಲಕ್ಷಣವು. ಪೃಥಿವಿಯು ಲಕ್ಷ್ಯವು. ಲಕ್ಷಣವೆಂದರೆ- ಲಕ್ಷ್ಯತೇ ಜ್ಞಾಯತೇ ಅನೇನೇತಿ ಲಕ್ಷಣಂ. ಅರ್ಥಾತ್ - ಯಾವ ಸ್ವರೂಪದಿಂದ ಪದಾರ್ಥವು ತಿಳಿಯಲ್ಪಡುತ್ತದೆ ( ಜ್ಞಾಯತೇ) ಅದೇ ಸ್ವರೂಪವೇ ಲಕ್ಷಣವು . ಉದಾ :- ಸಾಸ್ನಾದಿಯಿಂದ ಆಯಂ ಗೌಃ ಎಂಬ ಜ್ಞಾನ ಬರುತ್ತದೆ. ಆದಕಾರಣ ಸಾಸ್ನಾದಿಯೇ ಗೋವಿನ ಲಕ್ಷಣವು. ಅದರಂತೆ ಗಂಧದಿಂದಲೇ ಇಯಂ ಪೃಥಿವೀ ಎಂಬ ಜ್ಞಾನ ಬರುತ್ತದೆ. ಆದ್ದರಿಂದ ಗಂಧವತ್ವವೇ (ಗಂಧವೇ) ಪೃಥಿವೀಯ ಲಕ್ಷಣವು. ಲಕ್ಷಣದಿಂದ ಯಾವದರ ಜ್ಞಾನವಾಗುತ್ತದೆಯೋ ಅದೇ ಲಕ್ಷ್ಯವು ಪ್ರಕೃತ ಗಂಧವತ್ತ್ವಜ್ಞಾದಿಂದ ಪೃಥಿವಿಯ ಜ್ಞಾನವಾಗುತ್ತದೆ. ಕಾರಣ ಉಕ್ತ ಲಕ್ಷಣಕ್ಕೆ ಪೃಥಿವಿಯೇ ಲಕ್ಷ್ಯವೆಂದು ತಿಳಿಯಬೇಕು, ಏವಂ ಚ ಗಂಧವತ್ತ್ವವೇ ಪೃಥಿವಿಯ ಲಕ್ಷಣವು. ಈ ಪೃಥಿವಿಯು ಎರಡು ವಿಧ - ನಿತ್ಯ ಪೃಥಿವಿ ಮತ್ತು ಅನಿತ್ಯ ಪೃಥಿವಿ ಎಂದು ನಿತ್ಯ ಪೃಥಿವಿಯು ಪರಮಾಣುರೂಪವು, ಅನಿತ್ಯ ಪೃಥಿವಿಯು ಕಾರ್ಯರೂಪವು. ಈ ಪೃಥಿವಿಯು ಪುನಃ ಶರೀರ, ಇಂದ್ರಿಯ ಮತ್ತು ವಿಷಯ ಎಂಬ ಭೇದದಿಂದ ಮೂರುವಿಧವಾಗಿದೆ. ತನ್ನ ಭೋಗಕ್ಕೆ(ಸುಖ ದುಃಖ ರೂಪ ಜ್ಞಾನಕ್ಕೆ) ಆಶ್ರಯವಾದದ್ದೇ ಶರೀರವು . ಈ ಶರೀರವು ಪಾರ್ಥಿವಶರೀರವು ( ಮಾನವರದ್ದು). ಗಂಧವನ್ನು ಗ್ರಹಣಮಾಡತಕ್ಕದ್ದೇ ಘ್ರಾಣೇಂದ್ರಿಯವು . ಈ ಇಂದ್ರಿಯವು ( ನಾಸಾಗ್ರೇ ವರ್ತತ ಇತಿ ನಾಸಾಗ್ರವರ್ತಿ) ಮೂಗಿನ ತುದಿಯಲ್ಲಿರುತ್ತದೆ. ವಿಷಯರೂಪವಾದ ಪೃಥಿವಿಯು ಮಣ್ಣು, ಕಲ್ಲು ಮೊದಲಾದವುಗಳೇ ಆಗಿರುತ್ತವೆ. ( ದ್ವ್ಯಣುಕುವಿನಿಂದ ಬ್ರಹ್ಮಾಂಡಪರ್ಯಂತ ಎಲ್ಲವೂ ಗಂಧವುಳ್ಳದ್ದಾಗಿ ಪೃಥಿವೀ ವಿಷಯವಾಗಿರುತ್ತದೆ. )

**ತ.ಸ. :- ಶೀತಸ್ಪರ್ಶವತ್ಯ ಆಪಃ । ತಾಶ್ಚ ದ್ವಿವಿಧಾಃ । ನಿತ್ಯಾ ಅನಿತ್ಯಾಶ್ಚ। ನಿತ್ಯಾಃ ಪರಮಾಣುರೂಪಾಃ । ಅನಿತ್ಯಾಃ ಕಾರ್ಯರೂಪಾಃ । ತಾಃ ಪುನ ಸ್ತ್ರಿವಿಧಾಃ ಶರೀರೇಂದ್ರಿಯವಿಷಯಭೇದಾತ್ । ಶರೀರಂ ವರುಣ ಲೋಕೇ। ಇಂದ್ರಿಯಂ ರಸಗ್ರಾಹಕಂ ರಸನಂ । ಜಿಹ್ವಾಗ್ರವರ್ತಿ। ವಿಷಯ ಃ ಸರಿತ್ಸಮುದ್ರಾದಿ ।**

ಬಾ.ಬೊ :- ಸಮವಾಯಸಂಬಂಧದಿಂದ ಶೀತಸ್ಪರ್ಶವುಳ್ಳದ್ದೇ ಆಪಃ (ನೀರು) ಶೀತಾಶ್ಚಾಸೌ ಸ್ಪರ್ಶಶ್ಚ ಶೀತ ಸ್ಪರ್ಶಃ ಶೀತಸ್ಪರ್ಶಃ ಆಸು ಆಸ್ತೀತಿ, ಶೀತಸ್ಪರ್ಶವತ್ಯಃ ಶೀತಸ್ಪರ್ಶವುಳ್ಳದ್ದು ಜಲವು ಎಂಬ ಅಭಿಪ್ರಾಯ. ಈ ಜಲವು ಎರಡು ಪ್ರಕಾರವಿದೆ. ನಿತ್ಯ ಮತ್ತು ಅನಿತ್ಯವೆಂದು. ನಿತ್ಯ ಜಲವು ಪರಮಾಣುರೂಪವು. ಇಲ್ಲಿ ಪರಮಾಣು ಎಂದರೆ ಗವಾಕ್ಷ ರಂಧ್ರ ( ಕಿಟಕಿ ತೂಬು) ದಿಂದ ಹೊರಬಿದ್ದ ಸೂರ್ಯಕಿರಣಗಳಿಲ್ಲಿದ್ದ ಸೂಕ್ಷ್ಮವಾದ ಧೂಲಿಕಣವು ತ್ರ್ಯಣುಕ ಎಂದು ಕರೆಯಲ್ಪಡುತ್ತದೆ. ಈ ತ್ರ್ಯಣುಕದ ಮೂರನೆಯ ಒಂದು ಅವಯವವೇ ದ್ವ್ಯಣುಕು ಇದರ ಅವಯವವೇ ಪರಮಾಣು. ಇದು ಅತಿಂದ್ರಿಯವಾಗಿರುತ್ತದೆ. ಹೀಗೆ ಎಲ್ಲ ಕಡೆ ತಿಳಿಯಬೇಕು. ಅನಿತ್ಯವು ಕಾರ್ಯರೂಪವು ( ದ್ವ್ಯಣುಕು ಆರಂಭಿಸಿ ಎಲ್ಲ ಸಾವಯವ ಜಲವು ಅನಿತ್ಯವು) ಶರೀರವು ವರುಣಲೋಕದಲ್ಲಿ (ನಮ್ಮ ಇಂದ್ರಿಯಗಳಿಗೆ ಅಗೋಚರವಾಗದ ವರುಣಲೋಕದಲ್ಲಿ ಜಲೀಯ ಶರೀರಗಳು ಇರುತ್ತವೆ) ಜಲೇಂದ್ರಿಯವು - ರಸನಗ್ರಾಹಕ (ರಸದ ಜ್ಞಾನ ಹುಟ್ಟಿಸತಕ್ಕ) ರಸನೇಂದ್ರಿಯವು . ಜಿಹ್ವಾಗ್ರವರ್ತಿ - ನಾಲಿಗೆಯ ತುದಿಯಲ್ಲಿರುತ್ತದೆ ವಿಷಯ :- ಜಲವು ನದೀ ಸಮುದ್ರಾದಿಗಳು

**ತ.ಸ. :- ಉಷ್ಣ ಸ್ಪರ್ಶವತ್ತೇಜಃ । ತದ್ ದ್ವಿವಿಧಂ । ನಿತ್ಯ ಮನಿತ್ಯಂಚೇತಿ। ನಿತ್ಯಂ ಪರಮಾಣುರೂಪಂ । ಅನಿತ್ಯಂ ಕಾರ್ಯರೂಪಂ । ಪುನಸ್ತ್ರಿವಿಧಂ। ಶರೀರೇಂದ್ರಿಯ ವಿಷಯಭೇದಾತ್ । ಶರೀರಮಾದಿತ್ಯ ಲೋಕೇ । ಪ್ರಸಿದ್ಧಂ । ಇಂದ್ರಿಯಂ ರೂಪಗ್ರಾಹಕಂ ಚಕ್ಷುಃ, ಕೃಷ್ಣ ತಾರಾಗ್ರವರ್ತಿ। ವಿಷಯಶ್ಚತುರ್ವಿಧಃ । ಭೌಮದಿವ್ಯೋದರ್ಯಾ ಕರಜಭೇದಾತ್ । ಭೌಮಂ ವಹ್ನ್ಯಾದಿ । ಅಬಿಂಧನಂ ದಿವ್ಯಂ ವಿದ್ಯುದಾದಿ। ಭುಕ್ತಾಸ್ನ ಪರಿಣಾಮಹೇತುಃ ಉದಾರ್ಯಂ ಆಕರಜಂ ಸುವರ್ಣಾದಿ ।**

ಬಾ. ಬೋ.: - ಸಮವಾಯ ಸಂಬಂಧದಿಂದ ಉಷ್ಣಸ್ಪರ್ಶವುಳ್ಳದ್ದೇ ತೇಜಸ್ಸು ಈ ತೇಜಸ್ಸು ಎರಡು ವಿಧ. ನಿತ್ಯ ತೇಜಸ್ಸು ಹಾಗು ಅನಿತ್ಯ ತೇಜಸ್ಸು ಎಂದು. ನೀತ್ಯ ತೇಜಸ್ಸು ಪರಮಾಣುರೂಪವಾಗಿದೆ. ಅನಿತ್ಯತೇಜಸ್ಸು ಕಾರ್ಯರೂಪವಾಗಿದೆ. ಈ ತೇಜಸ್ಸು ಮತ್ತೆ ಶರೀರ ,ಇಂದ್ರಿಯ, ವಿಷಯವೆಂಬ ಭೇದದಿಂದ ಮೂರು ಪ್ರಕಾರವಾಗಿದೆ. ತೈಜಸಶರೀರವು ಸೂರ್ಯಲೋಕದಲ್ಲಿರುತ್ತದೆ. ರೂಪದ ಜ್ಞಾನಕ್ಕೆ ಸಾಧನವಾದ ಇಂದ್ರಿಯವೇ ಚಕ್ಷುರಿಂದ್ರಿಯವು (ಕಣ್ಣು). ಇದು ಕಣ್ಣುಗುಡ್ಡಿಯ ಮಧ್ಯದಲ್ಲಿರತಕ್ಕ ಬಿಳೀ ಚುಕ್ಕಿಯೇ ಆ ಚಕ್ಷುರಿಂದ್ರಿಯವು. ಈ ತೇಜಸ್ಸಿನ ವಿಷಯಗಳು. ಭೂಮಿಯಲ್ಲಿ ಹುಟ್ಟಿದ ವಹ್ನ್ಯಾದಿಗಳೇ (ಭೌಮವು) ಅಂದರೆ ಕಾಷ್ಠಾದಿ ರೂಪ ಇಂಧನ ಜನ್ಯ ವಾದದ್ದು ಭೌಮವು ಭೂಮೌ ಭವಂ ಭೌಮಂ ಎಂದು ವಿಗ್ರಹ, ಅಬಿಂಧನಂ ದಿವ್ಯಂ ಅಂದರೆ ನೀರೇ ಪ್ರಕಾಶಕ್ಕೆ ಸಾಧನವಾಗಿರುವದೋ ಅದೇ ಅಬಿಂಧನ ಅಂದರೆ ವಿದ್ಯುತ್ ( ಮಿಂಚು) ಯಾವ ಮಿಂಚಿಗೆ ನೀರೇ ಸಾಧನವೋ ಆ ಮಿಂಚು ( ವಿದ್ಯುತ್) ದಿವ್ಯವು ದಿವಿಭವಂ ದಿವ್ಯಂ ಎಂದು ವಿಗ್ರಹ, ಅಬಿಂಧನಂ ಎಂಬಲ್ಲಿ ವಿಗ್ರಹ:- ಅಪಃ ಇಂಧನಾನಿ ದೀಪ್ತಿ ಸಾಧನಾನಿ ಯಸ್ಯ ತತ್ ಅಬಿಂಧನಂ ಎಂದು ತಿಳಿಯಬೇಕು. ಆಕಾಶದಲ್ಲಿ ಹುಟ್ಟಿದ್ದು (ದಿವ್ಯಂ) , ಭುಕ್ತವಾದ ಅನ್ನಕ್ಕೆ ಪರಿಣಾಮ ಮಾಡತಕ್ಕ ಜಾಠರಾಗ್ನಿಯೇ ಉದರ್ಯವು (ಉದರೇ ಭವಂ ಉದರಲ್ಲಿರುತ್ತದೆ). ಖಣಿಯಲ್ಲಿ ಹುಟ್ಟಿದ ಸುವರ್ಣಾದಿಗಳೇ (ಆಕರಜಗಳು) ಆಕರೇ ಖನ್ಯಾಂ ಜಾಯತ ಇತಿ ಆಕರಜಂ ಎಂದು ವಿಗ್ರಹ.

**ತ.ಸಂ. :- ರೂಪರಹಿತಸ್ಪರ್ಶವಾನ್ ವಾಯುಃ । ಸ ದ್ವಿವಿಧ ಃ । ನಿತ್ಯೋಽನಿತ್ಯಶ್ಚೇತಿ। ನಿತ್ಯಃ ಪರಮಾಣುರೂಪಃ । ಅನಿತ್ಯಃ ಕಾರ್ಯರೂಪಃ। ಪುನಸ್ತ್ರಿವಿಧ ಃ ಶರೀರೇಂದ್ರಿಯವಿಷಯಭೇದಾತ್ । ಶರೀರಂ ವಾಯು ಲೋಕೇ । ಇಂದ್ರಿಯಂ ಸ್ಪರ್ಶಗ್ರಾಹಕಂ ತ್ವಕ್ ಸರ್ವಶರೀರ ವರ್ತಿ । ವಿಷಯೋ ವೃಕ್ಷಾದಿಕಂಪನಹೇತು ಃ। ಶರೀರಾಂತಃ ಸಂಚಾರೀ ವಾಯುಃ ಪ್ರಾಣಃ । ಸ ಏಕೋಽಪ್ಯುಪಾಧಿಭೇದಾತ್ ಪ್ರಾಣಾದಿಸಂಜ್ಞಾಂ ಲಭತೇ।**

ಬಾ. ಬೋ :- ವಾಯುವಿನ ಲಕ್ಷಣ ಹೇಳುತ್ತಾರೆ

ರೂಪಹಿತವಾಗಿ ಸ್ಪರ್ಶವುಳ್ಳದ್ದೇ ವಾಯುವು. ( ರೂಪೇಣ ರಹಿತಃ ರೂಪರಹಿತಃ, ಸ್ಪರ್ಶಃ ಅಸ್ಮಿನ್ನಸ್ತೀತಿ ಸ್ಪರ್ಶವಾನ್, ರೂಪರಹಿತಶ್ಚಾಸೌ ಸ್ಪರ್ಶವಾಂಶ್ಚ ರೂಪರಹಿತಸ್ಪರ್ಶವಾನ್, ತಸ್ಯ ಭಾವಃ ರೂಪರಹಿತ ಸ್ಪರ್ಶವತ್ತ್ವಂ. ಅಂದರೆ ರೂಪದಿಂದ ರಹಿತವಾಗಿ ಸ್ಪರ್ಶವುಳ್ಳದ್ದೇ

ವಾಯುವು ಇದು ಎರಡು ವಿಧ. ನಿತ್ಯ ಹಾಗು ಅನಿತ್ಯವೆಂದು. ನಿತ್ಯವಾದದ್ದು ಪರಮಾಣು ರೂಪವು. ಅನಿತ್ಯವಾದದ್ದು ಕಾರ್ಯರೂಪ ವಾಯುವು. ವಾಯುವು, ಶರೀರ, ಇಂದ್ರಿಯ ಹಾಗು ವಿಷಯವೆಂಬ ಭೇದದಿಂದ ಮತ್ತೆ ಮೂರು ಪ್ರಕಾರವಾಗಿದೆ. ಶರೀರವು ವಾಯುಲೋಕದಲ್ಲಿದೆ. ಇಂದ್ರಿಯವು ಸ್ಪರ್ಶಜ್ಞಾನ ಹುಟ್ಟಿಸತಕ್ಕ ತ್ವಕ್ (ಚರ್ಮ) ಇದು ಸರ್ವ ಶರೀರದಲ್ಲಿರುತ್ತದೆ. ವಿಷಯ ವೃಕ್ಷಾದಿಗಳ ಕಂಪನ ಕಾರಣವಾದದ್ದೇ ಆಗಿದೆ. ಶರೀರದ ಅಂತರಂಗದಲ್ಲಿ ಸಂಚರಿಸತಕ್ಕ ವಾಯು ಪ್ರಾಣವು ಒಂದೇ ಆದರೂ ಸ್ಥಾನ, ಬೇದದಿಂದ ಪ್ರಾಣಾಪಾನಾದಿನಾಮಗಳನ್ನು ಹೊಂದುತ್ತದೆ ಸ್ಥಾನ ಉಪಾಧಿಗಳು (ಆಶ್ರಯಗಳು) ಯಾವುವೆಂದರೆ:- ೧) ಮುಖನಾಸಿಕಗಳಿಂದ ಹೊರಗೆ ಹಾಗೂ ಒಳಗೆ ಪ್ರವೇಶ ಮಾಡುವದೇ ಪ್ರಾಣ. ೨) ಮಲಾದಿಗಳನ್ನು ಕೆಳಗೆ ಒಯ್ಯುವದೇ ಅಪಾನ. ೩) ಭುಕ್ತವಾದದ್ದನ್ನು ಪರಿಣಾಮಾಡುವದರ ಸಲುವಾಗಿ ಜಾಠರಾಗ್ನಿ ಯನ್ನು ಮೇಲಕ್ಕೆ ಒಯ್ಯುವದೇ ಸಮಾನನು. ೪) ಅನ್ನಾಹಾರಗಳನ್ನು ಊರ್ಧ್ವ ತರುವವನಾದ್ದರಿಂದ ಉದಾನನು. ೫) ನಾಡಿಗಳಲ್ಲಿ ಸಂಚರಿಸುವವನಾದ್ದರಿಂದ ವ್ಯಾನನು, ಹೀಗೆ ಒಬ್ಬನೇ ವಾಯುವು ಕ್ರಿಯಾಸ್ಥಾನಗಳ ಭೇದದಿಂದ ಪ್ರಾಣಾಪಾನಾದಿ ಸಂಜ್ಞೆಯನ್ನು ಹೊಂದುತ್ತಾನೆ.

**ತ.ಸಂ. :- ಶಬ್ದಗುಣಕಮಾಕಾಶಂ । ತಚ್ಚೈಕಂ ವಿಭುಃ । ನಿತ್ಯಂ ಚ ।**

ಬಾ. ಬೋ.:- ಆಕಾಶದ ಲಕ್ಷಣವನ್ನು ಹೇಳುತ್ತಾರೆ.
ಶಬ್ದಃ ಗುಣಃ ಯಸ್ಯ ತತ್ ಶಬ್ದಗುಣಕಂ - ಶಬ್ದವು ಗುಣವಾಗಿ ಉಳ್ಳದ್ದೇ ಆಕಾಶವು. (ಸಮವಾಯ ಸಂಬಂಧದಿಂದ ಶಬ್ದಗುಣತ್ತ್ವವೇ ಆಕಾಶದ ಲಕ್ಷಣವು) ಆಕಾಶದಲ್ಲಿ ಶಬ್ದ ಒಂದೇ ಗುಣ ಇದೆ. ಎಂದು ತಿಳಿಸಲು ಗುಣಪದವನ್ನು ಹೇಳಲಾಗಿದೆ. ಈ ಆಕಾಶವು ಒಂದೇ ಇರುತ್ತದೆ. ( ಆಕಾಶವು ಅನೇಕ ಎಂಬಲ್ಲಿ ಪ್ರಮಾಣವಿಲ್ಲ) ಎಲ್ಲ ಕಡೆ ಶಬ್ದ ಪ್ರಾಪ್ತಿಯಾಗುವದರಿಂದ ಆಕಾಶವು ವಿಭು ಆಗಿದೆ. ( ಅಂದರೆ ಸರ್ವಮೂರ್ತ ಪದಾರ್ಥಗಳ ಸಂಬಂಧವುಳ್ಳದ್ದು ಆಗಿದೆ. ) ಮೂರ್ತವೆಂದರೆ: - ಪೃಥಿವೀ, ಆಪ್, ತೇಜ, ವಾಯು, ಮನಸ್ಸುಗಳು ಆಗಿವೆ. ಪೃಥಿವೀ, ಆಪ, ತೇಜ, ವಾಯು, ಆಕಾಶ ಇವು ಭೂತಗಳು. ಭೂತಗಳೆಂದರೆ - ಬಹಿರಿಂದ್ರಿಯಗ್ರಾಹ್ಯವಿಶೇಷ ಗುಣವುಳ್ಳವುಗಳು, ಆಗಿರುತ್ತವೆ. ಈ ಆಕಾಶವು ನಿತ್ಯವು ( ಉತ್ಪತ್ತಿನಾಶ ಇಲ್ಲದ್ದು).

**ತ.ಸ.:- ಅತೀತಾದಿ ವ್ಯವಹಾರಹೇತು ಃ ಕಾಲಃ । ಸ ಚೈಕೋ ವಿಭುರ್ನಿತ್ಯಶ್ಚ ।**

ಬಾ. ಬೋ.: - ಕಾಲದ ಲಕ್ಷಣ ಹೇಳುತ್ತಾರೆ.

ಅತೀತಾದಿ ವ್ಯವಹಾರಹೇತುಃ (ಇಲ್ಲಿ ವಿಗ್ರಹಃ - ಅತೀತಃ ಆದಿಃ ಯಸ್ಯ ಸಃ ಅತೀತಾದಿಃ ಅತಿತಾದೇಃ ವ್ಯಾವಹಾರಃ ಅತೀತಾದಿವ್ಯವಹಾರಃ ತಸ್ಯ ಹೇತುಃ ಎಂದು ತಿಳಿಯಬೇಕು) ಇದರ ಅರ್ಥ ಘಟೋಽತೀತಃ, ಮಠೋಭವಿಷ್ಯತಿ, ಪಟೋ ಭವತಿ ಇತ್ಯಾಕಾರಕ ವ್ಯವಹಾರ ಶಬ್ದಪ್ರಯೋಗ. ಈ ಶಬ್ದಪ್ರಯೋಗಕ್ಕೆ ಕಾರಣವಾದದ್ದೇ ಕಾಲವು ಅತೀತ ವೆಂದರೆ ವರ್ತಮಾನಕಾಲ ವೃತ್ತಿಧ್ವಂಸ ಪ್ರತಿಯೋಗಿ. ವರ್ತಮಾನಕಾಲದಲ್ಲಿದ್ದ ಧ್ವಂಸ ಅಂದರೆ ಘಟಧ್ವಂಸಃ ಇದಕ್ಕೆ ಪ್ರತಿಯಾಗಿ ಘಟ ಇದೇ ಅತೀತವು. ಈ ಅತೀತಾ ದಿವ್ಯವಹಾರ ಅಂದರೆ ಘಟೋ ಅತೀತ ಇತ್ಯಾದಿ ಶಬ್ದಪ್ರಯೋಗವು, ಇದಕ್ಕೆ ಕಾರಣ ವಾದದ್ದೇ ಕಾಲವು. ಅದರಂತೆ ಘಟೋ ಭವಿಷ್ಯತಿ ಅಂದರೆ ವರ್ತಮಾನಕಾಲ ವೃತ್ತಿ ಪ್ರಾಗಭಾವ ಪ್ರತಿಯೋಗಿ ವರ್ತಮಾನಕಾಲ ವೃತ್ತಿಪ್ರಾಗಭಾವಃ ಅಂದರೆ ವರ್ತಮಾನ ಕಾಲದಲ್ಲಿದ್ದ ಘಟಪ್ರಾಗಭಾವಃ ಇದಕ್ಕೆ ಪ್ರತಿಯೋಗಿ ಆಗಿದೆ ಘಟವು, ಈ ಘಟವು ಭವಿಷ್ಯತಿ ಎಂಬ ವ್ಯವಹಾರಕ್ಕೆ ಕಾರಣವಾದದ್ದೆ ಭವಿಷ್ಯತ್ ಕಾಲವು. ನಂತರ ವರ್ತ ಮಾನಕಾಲ ಸಂಬಂಧಿಯಾದ ಘಟೋ ಭವತಿ ಎಂಬ ಘಟ ವ್ಯವಹಾರ (ಶಬ್ದಪ್ರಯೋಗ) ಇದಕ್ಕೆ ಕಾರಣವಾದದ್ದೇ ವರ್ತಮಾನ ಕಾಲವು ಈ ಕಾಲವು ಒಂದೇ ಇರುತ್ತದೆ. ಹಾಗೂ ವಿಭು ಆಗಿದೆ. (ವ್ಯಾಪ್ತವೂ) ನಿತ್ಯವೂ ಆಗಿದೆ. ಅಂದರೆ (ಉತ್ಪತ್ತಿನಾಶರಹಿತವೂ ಆಗಿದೆ).

ತ. ಸ.:- ಪ್ರಾಚ್ಯಾದಿವ್ಯ ವಹಾರಹೇತುಃ ದಿಕ್ । ಸಾ ಚೈಕಾ ನಿತ್ಯಾ ವಿಭ್ವೀಚ।

ಬಾ. ಬೋ:- ಇಯಂ ಪ್ರಾಚೀ, ಇಯಂ ಪ್ರತೀಚಿ, ಇಯಂ ಉದೀಚಿ ಎಂಬ ವ್ಯವಹಾರ (ಶಬ್ದಯೋಗ) ಇದಕ್ಕೆ ಕಾರಣವಾದದ್ದೇ ದಿಕ್ಕು ವಿವರಣೆ - ದಿಕ್ಕುಗಳು ಒಂದೇ ಆದಲ್ಲಿ ಪ್ರಾಚೀ, ಪ್ರತೀಚ, ಉದೀಚಿ. ದಕ್ಷಿಣಾ ಹೀಗೆ ವ್ಯವಹಾರವಿದೆ. ದಿಕ್ಕು ಒಂದಾದಲ್ಲಿ ಮೇಲಿನ ವ್ಯವಹಾರ ಹೇಗೆ ಕೂಡುತ್ತದೆ ? ಎಂಬ ಶಂಕೆ ಸರಿಯಲ್ಲ, ದಿಕ್ಕು ಒಂದೇ ಆದರೂ ಉಪಾಧಿಭೇದದಿಂದ ಪ್ರಾಚ್ಯಾದಿವ್ಯವಹಾರ ಮಾಡುವದು ಕೂಡುತ್ತದೆ. ಹೇಗೆಂದರೆ:- ಸೂರ್ಯೋದಯ ಸಂಯುಕ್ತಾ, ದಿಕ್, ಪ್ರಾಚೀ, ಇಲ್ಲಿ ಸೂರ್ಯೋದಯ ಸಂಯೋಗವೇ ಉಪಾಧಿಯು. ಅಸ್ತಾಚಲಸನ್ನಿಹಿತಾ ದಿಕ್, ಪ್ರತೀಚೀ, ಮೇರು ಸನ್ನಿಹಿತ ದೇಶಾವಚ್ಛಿನ್ನಾ ದಿಕ್, ಉದೀಚಿ, ಮೇರು ವ್ಯವಹಿತ ದೇಶಾವಚ್ಛಿನ್ನಾ ದಿಕ್, ದಕ್ಷಿಣಾ, ಹೀಗೆ ಅಸ್ತಾಚಲ ಮೇರ್ವಾದಿಸನ್ನಿಹಿತಾದಿ ಉಪಾಧಿಭೇದದಿಂದ ದಿಕ್ಕಿನಲ್ಲಿ ಭೇದವೇ ಹೊರತು, ಸ್ವಯಂ ದಿಕ್ಕು ಒಂದೇ ಇರುತ್ತದೆ. ಹಾಗೂ ಅದು ವಿಭು ವ್ಯಾಪ್ತವೂ, ನಿತ್ಯವೂ, (ಉತ್ಪತ್ತಿನಾಶರಹಿತವೂ) ಆಗಿದೆ.

**ತ.ಸಂ.:- ಜ್ಞಾನಾಧಿಕರಣಮಾತ್ಮಾ ಸಃ ದ್ವಿವಿಧಃ । ಜೀವಾತ್ಮಾ ಪರಮಾತ್ಮಾ ಚೇತಿ । ತತ್ರೇಶ್ವ ರಃ ಸರ್ವಜ್ಞ ಃ ಪರಮಾತ್ಮಾ ಏಕ ಏವ ಸುಖ ದುಃಖಾದಿರಹಿತಃ । ಜೀವಾತ್ಮಾ ಪ್ರತಿಶರೀರಂ ಭಿನ್ನಃ ವಿಭುರ್ನಿತ್ಯಶ್ಚ ।**

ಬಾ.ಬೋ:- ಆತ್ಮನ ಲಕ್ಷಣವನ್ನು ಹೇಳುತ್ತಾರೆ.

ಸಮವಾಯಸಮಬಂಧದಿಂದ ಜ್ಞಾನಕ್ಕೆ ಅಧಿಕರಣ (ಆಶ್ರಯ) ನಾದವನೇ ಆತ್ಮನು.

(ಜ್ಞಾನಸ್ಯ ಅಧಿಕರಣಂ ಜ್ಞಾನಾಧಿಕರಣಂ)

ವಿವರಣೆ :- ಇಲ್ಲಿ ಜ್ಞಾನಕ್ಕೂ ಆತ್ಮನಿಗೂ ನಿತ್ಯ ಸಂಬಂಧವೇ ಸಮವಾಯವು ಈ ಸಂಬಂಧದಿಂದ ಜ್ಞಾನವು ಆತ್ಮನಲ್ಲಿ ಇರುತ್ತದೆ. ಈ ಆತ್ಮನು ಎರಡು ಪ್ರಕಾರ ೧) ಪರಮಾತ್ಮಾ - ಇವನು ಒಬ್ಬನೇ ಇದ್ದಾನೆ ಸುಖ ದುಃಖಗಳಿಂದ ರಹಿತನು. ೨) ಜೀವಾತ್ಮನು ಪ್ರತಿಶರೀರದಿಂದ ಭಿನ್ನನು. ವಿಭು (ವ್ಯಾಪ್ತನು) ನಿತ್ಯನು ಆಗಿದ್ದಾನೆ. ಹಾಗೂ ಪರಮಾತ್ಮನು ಸರ್ವಜ್ಞನು. (ಸರ್ವಂ ಜಾನಾತೀತಿ ಸರ್ವಜ್ಞಃ) ಹಾಗೂ ಈಶ್ವರನು ಜಗಜ್ಜನ್ಮಾದಿಕಾರಣನೂ ಆಗಿದ್ದಾನೆ. ಜೀವನೂ ಸಹ ಸಮವಾಯಸಂಬಂಧದಿಂದ ಜ್ಞಾನಾಶ್ರಯನು. ಆಗಿದ್ದಾನೆ. ಈ ಜೀವರು ಅಸಂಖ್ಯಾತರು. ಸುಖ ದುಃಖ ಭೋಗವೈಚಿತ್ರ್ಯದಿಂದ ಪ್ರತಿಶರೀರದಲ್ಲಿ ಭಿನ್ನರಾಗಿದ್ದಾರೆ.

**ತ.ಸಂ. :- ಸುಖದು ಃಖೋಪಲಬ್ಧಿಸಾಧನಂ ಇಂದ್ರಿಯಂ ಮನಃ । ತಚ್ಚ ಪ್ರತ್ಯಾತ್ಮ ನಿಯತತ್ವಾತ್ ಅನಂತಂ ಪರಮಾಣುರೂಪಂ ನಿತ್ಯಂ ಚ ।**

ಬಾ.ಬೋ:- ಮನಸ್ಸಿನ ಲಕ್ಷಣವನ್ನು ಹೇಳುತ್ತಾರೆ.

(ವಿಗ್ರಹ : ಸುಖ ದುಃಖಾದೀನಾಂ ಉಪಲಬ್ಧಿಃ, ಸಾಕ್ಷಾತ್ಕಾರ ಃ, ತಸ್ಯ ಸಾಧನಂ) ಸುಖದುಃಖಾದಿಗಳ ಅನುಭವಕ್ಕೆ ಸಾಧನವಾದದ್ದೇ ಮನಸ್ಸು (ಇಂದ್ರಿಯವು) ಈ ಮನಸ್ಸು ಪ್ರತಿ ಆತ್ಮನಲ್ಲಿ (ಜೀವರಲ್ಲೂ) ನಿಯತವಾಗಿರುತ್ತದೆ. (ಪ್ರತಿ ಜೀವರಲ್ಲಿ ಜ್ಞಾನದ ಉತ್ಪತ್ತಿ ಆಗುವದರ ಸಲುವಾಗಿ ಸಂಯೋಗ ಸಂಬಂಧದಿಂದ ಇರುತ್ತದೆ.) ಈ ಮನಸ್ಸು ಅನಂತವಾಗಿದೆ ಹಾಗೂ ನಿತ್ಯವೂ ಆಗಿದೆ.

**ದ್ರವ್ಯ ಪ್ರಕರಣಂ ಸಮಾಪ್ತಂ**



**ತ.ಸಂ. :- ಚಕ್ಷುರ್ಮಾತ್ರಗ್ರಾಹ್ಯೋ ಗುಣೋ ರೂಪಂ । ತಚ್ಚ ಶುಕ್ಲ ನೀಲ ಪೀತ ಹರಿತ ಕಪಿಶ ಚಿತ್ರಭೇದಾತ್ ಸಪ್ತವಿಧಂ । ಪೃಥಿವೀ ತೇಜೋ ಜಲವೃತ್ತಿ ತತ್ರ ಪೃಥಿವ್ಯಾಂ ಸಪ್ತವಿಧಂ । ಅಭಾಸ್ವರಂ ಶುಕ್ಲಂ ಜಲೇ, ಭಾಸ್ವರಂ ಶುಕ್ಲಂ ತೇಜಸಿ ।**

ಬಾ.ಬೋ.:- ರೂಪದಲಕ್ಷಣವನ್ನು ಹೇಳುತ್ತಾರೆ.
ಚಕ್ಷುರಿಂದ್ರಿಯದಿಂದ ಜನ್ಯವಾದ ಜ್ಞಾನ ಅಂದರೆ ರೂಪಜ್ಞಾನ ಈ ಜ್ಞಾನಕ್ಕೆ ವಿಷಯ ವಾಗಿದೆ ರೂಪ. ಹಾಗೂ ಗುಣವೂ ಆಗಿದೆ . ಆದಕಾರಣ ಚಕ್ಷುರ್ಮಾತ್ರ ಗ್ರಾಹ್ಯಗುಣವತ್ತ್ವ ಈ ರೂಪದಲ್ಲಿ ಬರುವದರಿಂದ ಲಕ್ಷಣ ಸಮನ್ವಯ ವಾಗುತ್ತದೆ. ಈ ರೂಪವು - ಶುಕ್ಲ( ಬಿಳಿ), ನೀಲ (ನೀಲಿ), ಪೀತ ( ಹಳದಿ), ರಕ್ತ(ಕೆಂಪು), ಕಪಿಶ( ಕಪ್ಪು), ಹರಿತ ( ಹಸಿರು), ಚಿತ್ರ ( ಚಿತ್ರರೂಪ ) ಹೀಗೆ ಏಳು ಪ್ರಕಾರದ್ದಾಗಿರುತ್ತದೆ. ಪೃಥಿವೀ , ಜಲ, ತೇಜಸ್ಸಿನಲ್ಲಿ ಇರುತ್ತದೆ. ವಿವರಣೆ:- ಅಭಾಸ್ವರ ಎಂಬಲ್ಲಿ ವಿಗ್ರಹ:- ನ ಭಾಸ್ವರಃ ಅಭಾಸ್ವರಃ ಅಂದರೆ ಪರವಸ್ತುಗಳನ್ನು ಪ್ರಕಾಶಪಡಿಸದೇ ಇರುವ ಶುಕ್ಲರೂಪವೇ ಅಭಾಸ್ವರವು (ಪರಾಪ್ರಕಾಶರೂಪ ) ಇದು ಜಲದಲ್ಲಿ ಇರುತ್ತದೆ. ಪರಪ್ರಕಾಶವಾದ (ಪರಪದಾರ್ಥಪ್ರಕಾಶಗೊಳಿಸುವ) ರೂಪವು ಭಾಸ್ವರ ಶುಕ್ಲರೂಪವು. ಇದು ತೇಜಸ್ಸಿನಲ್ಲಿರುತ್ತದೆ.

**ತ.ಸಂ. :- ರಸನಾಗ್ರಾ ಹ್ಯೋ ಗುಣೋ ರಸಃ । ಸ ಚ ಮಧುರಾಮ್ಲ ಲವಣ ಕಟುಕಷಾಯ ತಿಕ್ತಭೇದಾತ್ ಷಡ್ವಿಧಃ । ಪೃಥಿವೀ ಜಲವೃತ್ತಿ ಃ । ಪೃಥಿವ್ಯಾಂ ಷಡ್ವಿಧಃ । ಜಲೇ ಮಧುರ ಏವ ।**

ಬಾ.ಬೋ :- ಯಾವುದು ರಸನೇಂದ್ರಿಯ (ನಾಲಿಗೆ) ಜನ್ಯವಾದ ಜ್ಞಾನಕ್ಕೆ ವಿಷಯವಾಗಿದೆಯೋ ಹಾಗೂ ಗುಣವಾಗಿದೆಯೋ ಆದೇ ರಸವು ( ರಸನೇಂದ್ರಿಯ ಜನ್ಯಜ್ಞಾನವೇಂದರೆ ರಸಜ್ಞಾನ. ಇದಕ್ಕೆ ವಿಷಯಾಗಿದೆ, ಹಾಗೂ ಗುಣವೂ ಆಗಿದೆ. ಈ ರಸವು ಆರು ವಿಧ - ಮಧುರ ( ಸಿಹಿ) , ಆಮ್ಲ(ಹುಳಿ), ಲವಣ (ಉಪ್ಪು) ಕಷಾಯ (ಒಗರು) , ಕಟು (ಖಾರ) , ತಿಕ್ತ(ಕಹಿ) , ಈ ಆರು ರಸಗಳು ಪೃಥವಿಯಲ್ಲಿ ಇರುತ್ತವೆ. ಜಲದಲ್ಲಿ ಮಾತ್ರ ಮಧುರ( ಸಿಹಿ) ರಸವಿರುತ್ತದೆ.

**ತ.ಸಂ. :- ಘ್ರಾಣಗ್ರಾಹ್ಯೋ ಗುಣೋ ಗಂಧಃ । ಸ ದ್ವಿವಿಧ ಃ ಸುರಭಿರಸುರಭಿಶ್ಚ । ಪೃಥಿವೀ ಮಾತ್ರ ವೃತ್ತಿಃ ।**

ಬಾ. ಬೋ. :- ಗಂಧದ ಲಕ್ಷಣವನ್ನು ಹೇಳುತ್ತಾರೆ.

ಯಾವದು ಘ್ರಾಣೇಂದ್ರಿಯಜನ್ಯ ಜ್ಞಾನಕ್ಕೆ ವಿಷಯವಾಗಿದೆಯೋ ಅದೇ ಗಂಧವು (ಘ್ರಾಣೇಂದ್ರಿಯಜನ್ಯ ಜ್ಞಾನ ಅಂದರೆ ಗಂಧಜ್ಞಾನ. ಈ ಜ್ಞಾನಕ್ಕೆ ವಿಷಯವಾಗಿದೆ ಗಂಧವು) ಹಾಗೂ ಗುಣವೂ ಆಗಿದೆ. ಗಂಧದಲ್ಲಿ ಲಕ್ಷಣ ಸಮನ್ವಯವಾಗುತ್ತದೆ. ಈ ಗಂಧವು ಎರಡು ವಿಧ . ಸುರಭಿ (ಸುಗಂಧ), ಅಸುರಭಿ (ದುರ್ಗಂಧ) ಇವೆರಡೂ ಪೃಥಿವಿಯಲ್ಲಿ ಮಾತ್ರ ಇರುತ್ತವೆ. (ಕಾರಣ ಗಂಧಕ್ಕೆ ಆಶ್ರಯ ಪೃಥಿವಿಯು ಆಗಿದೆ. )

**ತ.ಸಂ. :- ತ್ವಗಿಂದ್ರಿಯಗ್ರಾಹ್ಯೋ ಗುಣಃ ಸ್ಪರ್ಶಃ । ಸ ಚ ತ್ರಿವಿಧಃ । ಶೀತೋಷ್ಣಾನುಷ್ಣಾಶೀತ ಭೇದಾತ್ । ಪೃಥಿವ್ಯಪ್ತೇ ಜೋವೃತ್ತಿ ಃ । ತತ್ರ ಶೀತೋ ಜಲೇ, ಉಷ್ಣಸ್ತೇಜಸಿ, ಅನುಷ್ಣಾಶೀತಃ ಪೃಥಿವೀವಾಯ್ವೋ ಃ ।**

ಬಾ. ಬೋ. :- ತ್ವಗಿಂದ್ರಿಯದಿಂದ ಹುಟ್ಟಿದ ಜ್ಞಾನಕ್ಕೆ ವಿಷಯವಾಗಿ ಗುಣವಾದ್ದೇ ಸ್ಪರ್ಶವು (ತ್ವಗಿಂದ್ರಿಯಜನ್ಯಜ್ಞಾನ ಅಂದರೆ ಸ್ಪರ್ಶ ಜ್ಞಾನವು ಈ ಜ್ಞಾನಕ್ಕೆ ವಿಷಯವಾಗಿದೆ ಸ್ಪರ್ಶವು ಹಾಗೂ ಗುಣವು ಆಗಿದೆ ಕಾರಣ ಲಕ್ಷಣಸಮನ್ವಯವಾಗುತ್ತದೆ. ಈ ಸ್ಪರ್ಶವು ಮೂರು ವಿಧ ಶೀತ(ತಣ್ಣಗೆ) , ಉಷ್ಣ(ಬಿಸಿ) ಅನಷ್ಣಾಶೀತ(ಉಷ್ಣಶೀತವಾಗದಿರುವದು) ಇವುಗಳಲ್ಲಿ ಶೀತಸ್ಪರ್ಶಕ್ಕೆ ಆಶ್ರಯವಾದದ್ದೇ ಜಲವು. ಉಷ್ಣಸ್ಪರ್ಶಕ್ಕೆ ಆಶ್ರಯವಾದದ್ದು ತೇಜಸ್ಸು. ಅನುಷ್ಣಾಶೀತಸ್ಪರ್ಶಕ್ಕೆ ಆಶ್ರಯವಾದದ್ದೇ ಪೃಥಿವಿಯು ಎಂದು ತಿಳಿಯಬೇಕು.

**ತ.ಸಂ. :- ರೂಪಾದಿಚತುಷ್ಟಯೊ ಪೃಥಿವ್ಯಾಂ ಪಾಕಜಮನಿತ್ಯಂಚ । ಅನ್ಯತ್ರ ಅಪಾಕಜಂ ನಿತ್ಯಮನಿತ್ಯಂಚ । ನಿತ್ಯಗತಂ ನಿತ್ಯಂ ಅನಿತ್ಯ ಗತಮನಿತ್ಯಂ ।**

ಬಾ. ಬೋ.:- ರೂಪ, ರಸ, ಗಂಧ, ಸ್ಪರ್ಶ ವೆಂಬ ರೂಪಾದಿಚತುಷ್ಟಯಗಳು ಪೃಥಿವಿಯಲ್ಲಿ ಪಾಕಜಂ - ವಿಲಕ್ಷಣ ತೇಜಃ ಸಂಯೋಗದಿಂದ ಹುಟ್ಟುತ್ತವೆ. ಈ ಚತುಷ್ಟಯವು - ಅನಿತ್ಯವೂ (ಉತ್ಪತ್ತಿನಾಶವಾಗತಕ್ಕದ್ದು) ಪೃಥಿವಿಯನ್ನು ಆರಂಭಿಸಿ ಅವಯವಿದ್ರವ್ಯ ಪರ್ಯಂತರವಾಗಿ ಸರ್ವತ್ರದಲ್ಲಿ ರೂಪಾದಿ ಚತುಷ್ಟಯಗಳು ಇರುತ್ತವೆ. ಅವು ಅನಿತ್ಯವೇ ಆಗಿರುತ್ತವೆ. ಅನ್ಯತ್ರದಲ್ಲಿ ತೇಜೋ ಹಾಗೂ ವಾಯುವಿನಲ್ಲಿ ಅಪಾಕಜವಾಗಿದೆ. ಪಾಕದಿಂದ ಬರತಕ್ಕವುಗಳು ಅಲ್ಲ (ವಿಲಕ್ಷಣ ತೇಜಸ್ಸಂಯೋಗದಿಂದ ಹುಟ್ಟಿದ್ದವಲ್ಲ

ಎಂಬ ಭಾವ) ನಿತ್ಯಗತಂ ಜಲಾದಿ ಪರಮಾಣುವಿನಲ್ಲಿ ಈ ಮೂರು ರೂಪ, ರಸ, ಗಂಧಗಳು, ನಿತ್ಯವಾಗಿರುತ್ತವೆ. ಅನಿತ್ಯಗತಂ ದ್ವ್ಯಣುಕಾದಿಗಳಲ್ಲಿ ಅನಿತ್ಯವಾಗಿರುತ್ತವೆ. ಇದರಲ್ಲಿ ವಿಶೇಷವಿದೆ. ಅದೇನೆಂದರೆ ವಾಯುವಿನಲ್ಲಿ ರೂಪರಸಗಳು ಇರುವದಿಲ್ಲವೆಂದು ತಿಳಿಯಬೇಕು.

**ತ.ಸ.:- ಏಕತ್ವಾದಿವ್ಯವಹಾರಾಸಾಧಾರಣ ಹೇತುಃ ಸಂಖ್ಯಾ । ಸಾ ನವದ್ರವ್ಯ ವೃತ್ತಿಃ । ಏಕತ್ವಾದಿಪರಾರ್ಧಪರ್ಯಂತಾ, ಏಕತ್ವಂ ನಿತ್ಯಮನಿತ್ಯಂ ಚ, ನಿತ್ಯಗತಂ ನಿತ್ಯಂ ಅನಿತ್ಯಗತಮನಿತ್ಯಂ , ದ್ವಿತ್ವಾದಿಕಂ ತು ಸರ್ವತ್ರಾನಿತ್ಯ ಮೇವ ।**

ಬಾ.ಬೋ :- ಏಕತ್ವಾದಿವ್ಯವಹಾರಃ (ಏಕಃ ದ್ವೌ ಇತ್ಯಾದಿ ವ್ಯವಹಾರ ಃ ಏಕಾತ್ವಾದಿವ್ಯವಹಾರಃ ತಸ್ಯ ಅಸಾಧಾರಣಹೇತುಃ ಇತಿ ವಿಗ್ರಹ ) ಅರ್ಥ :- ಏಕಃ ದ್ವೌ ಇತ್ಯಾದಿ ವ್ಯವಹಾರಃ ಶಬ್ದಪ್ರಯೋಗಃ ಇದಕ್ಕೆ ಅಸಾಧಾರಣ ಕಾರಣವಾದದ್ದೇ ಸಂಖ್ಯಾ ನಾಮಕ ಗುಣವು. ಈ ಸಂಖ್ಯೆ ಒಂಬತ್ತು ದ್ರವ್ಯಗಳಲ್ಲಿಯೂ ಇರುತ್ತದೆ. ಇದು ಒಂದು ಅಂಕೆಯನ್ನು ಆರಂಭಿಸಿ ಪರಾರ್ಧಪರ್ಯಂತರ ಇರುತ್ತದೆ. ನಿತ್ಯವಾದ ಆಕಾಶದಲ್ಲಿರುವ ಏಕತ್ವವು ನಿತ್ಯವು ಅನಿತ್ಯವಾದ ಘಟಾದಿಗಳಲ್ಲಿರುವ ಏಕತ್ವವು ಅನಿತ್ಯವು. ದ್ವಿತ್ವಾದಿ ಸಂಖ್ಯಾ (ಎರಡು, ಮೂರು, ಇತ್ಯಾದಿ ಸಂಖ್ಯಾ) ಎಲ್ಲಾ ಕಡೆ ಅನಿತ್ಯವೇ ಆಗಿರುತ್ತದೆ. ಈ ಸಂಖ್ಯೆಯು ಅಪೇಕ್ಷಾಬುದ್ಧಿಯಿಂದ ಹುಟ್ಟುತ್ತದೆ. (ಅಯಂ ಏಕಃ, ಅಯಂ ಏಕಃ ಇಮೌ ದ್ವೌ ಎಂಬುದೇ ಅಪೇಕ್ಷಾ ಬುದ್ಧಿಯು) ಇದು ನಾಶವಾದರೆ ಸಂಖ್ಯೆಯು ನಾಶವಾಗುತ್ತದೆ.

**ತ.ಸ. :- ಮಾನವ್ಯವಹಾರಾಸಾಧಾರಣ ಕಾರಣಂ ಪರಿಮಾಣಂ । ನವ ದ್ರವ್ಯವೃತ್ತಿ ತಚ್ಚತುರ್ವಿಧಂ ಅಣು, ಮಹತ್, ದೀರ್ಘಂ, ಹ್ರಸ್ವಂ ಚೇತಿ।**

ಬಾ.ಬೋ. :- ಮಾನಂ - ಇಯತ್ತಾಯಾಃ ಅವಧಾರಣಂ ತಸ್ಯ ವ್ಯವಹಾರಃ ಇದಂ ದೀರ್ಘಂ, ಇದಂ ಹ್ರಸ್ವಂ ಇತ್ಯಾದಿ ವ್ಯವಹಾರ ಃ(ಶಬ್ದ ಪ್ರಯೋಗಃ) ತಸ್ಯ ಅಸಾಧಾರಣ ಕಾರಣಂ ಪರಿಮಾಣಂ.

ಅರ್ಥ : -ಮಾನಂ- ಇಯತ್ತಾಯ ಅವಧಾರಣವು ಇದರ ವ್ಯವಹಾರವೆಂದರೆ ಇದು ಧೀರ್ಘವು, ಇದು ಹ್ರಸ್ವವು ಇತ್ಯಾದಿ ವ್ಯವಹಾರ (ನಿಶ್ಚಯಃ) ಇದಕ್ಕೆ ಅಸಾಧಾರಣ

**ಕಾರಣವಾದದ್ದೇ ಪರಿಮಾಣವು. ಈ ಪರಿಮಾಣವು ನಾಲ್ಕು ವಿಧ. ಅಣು, ಧೀರ್ಘ, ಹ್ರಸ್ವ ಮಹತ್ ಎಂದು ನಾಲ್ಕು ಪ್ರಕಾರವಾಗಿದೆ ಇವು ಒಂಬತ್ತು ದ್ರವ್ಯಗಳಲ್ಲಿ ಇರುತ್ತವೆ.**

ತ.ಸ. :- **ಪೃಥಿಗ್ವ್ಯವಹಾರಾಸಾಧಾರಣಂ ಕಾರಣಂ ಪೃಥಕ್ತ್ವಂ । ಸರ್ವ ದ್ರವ್ಯವೃತ್ತಿ ।**

ಬಾ.ಬೋ :- ಆಯಂ ಅಸ್ಮಾತ್ ಪೃಥಕ್ ಇತ್ಯಾದಿ ವ್ಯವಹಾರಃ ತಸ್ಯ **ಅಸಾಧಾರಣಂ** ಕಾರಣಂ, ಇದರ ಅರ್ಥ :- ಇದು ಇದರಿಂದ ಪೃಥಕ್ (ಭಿನ್ನವು) ಇತ್ಯಾದಿ **ವ್ಯವಹಾರಃ** ಶಬ್ದಪ್ರಯೋಗವು ಇದಕ್ಕೆ ಅಸಾಧಾರಣ ಕಾರಣವಾದದ್ದೇ ಪೃಥಕ್ತ್ವವು. **ಇದು ಎಲ್ಲಾ** ದ್ರವ್ಯಗಳಲ್ಲಿಯೂ ಇರುತ್ತದೆ.

**ತ.ಸ. :- ಸಂಯುಕ್ತ ವ್ಯವಹಾರ ಅಸಾಧಾರಣೊ ಹೇತುಃ ಸಂಯೋಗಃ । ಸರ್ವದ್ರವ್ಯ ವೃತ್ತಿಃ ।**

ಬಾ.ಬೋ :- ಸಂಯೋಗದ ಲಕ್ಷಣ ಹೇಳುತ್ತಾರೆ.

ಇಮೌ ಸಂಯುಕ್ತೌ (ಇವೆರಡು ಪದಾರ್ಥಗಳು ಸಂಯುಕ್ತವಾಗಿವೆ.) ಇತ್ಯಾಕಾರಕ ವ್ಯವಹಾರಕ್ಕೆ ಅಸಾಧಾರಣ ಕಾರಣವಾದದ್ದೆ ಸಂಯೋಗವು. ಈ ಸಂಯೋಗವು ಒಂಬತ್ತು ದ್ರವ್ಯಗಳಲ್ಲಿರುತ್ತದೆ (ವಿಗ್ರಹ - ಇಮೌ ಸಂಯುಕ್ತೌ ಇತ್ಯಾಕಾರಕ ವ್ಯವಹಾರಸ್ಯ ಅಸಾಧಾರಣ ಹೇತುಃ ಸಂಯುಕ್ತವ್ಯವಹಾರ ಅಸಾಧಾರಹೇತು ಃ ಇತಿ)

**ತ.ಸ. :- ಸಂಯೋಗನಾಶಕೋ ಗುಣೋ ವಿಭಾಗಃ । ಸರ್ವದ್ರವ್ಯ ವೃತ್ತಿಃ ।**

ಬಾ.ಬೋ : - ಸಂಯೋಗಸ್ಯ ನಾಶಕಃ ಸಂಯೋಗನಾಶಕ ಃ ಗುಣಃ ವಿಭಾಗಃ ಎರಡು ಪದಾರ್ಥಗಳ ಸಂಯೋಗವನ್ನು ನಾಶಮಾಡುವದೇ ವಿಭಾಗವು (ದ್ರವ್ಯಗಳು ವಿಭಾಗವಾದದಲ್ಲಿ ಸಂಯೋಗವು ನಾಶವಾಗುತ್ತದೆ. ಈ ಸಂಯೋಗ ನಾಶಕವೇ **ವಿಭಾಗವು** ಇದು ಗುಣವು ಆಗಿದೆ. ಈ ವಿಭಾಗವು ಸರ್ವ ದ್ರವ್ಯಗಳಲ್ಲಿರುತ್ತದೆ.

ತ.ಸ.:- ಪರಾಪರವ್ಯವಹಾರಾಸಾಧಾರಣ **ಕಾರಣೆ ಪರತ್ವಾಪರತ್ವೇ । ಪೃಥಿವ್ಯಾದಿಚತುಷ್ಟಯ ಮನೋವೃತ್ತಿನೀ । ತೇ ದ್ವಿವಿಧೇ । ದಿಕ್ ಕೃತೇ ಕಾಲಕೃತೇ ಚೇತಿ । ದೂರಸ್ಥೆ ದಿಕ್ಕೃತಂ ಪರತ್ವಂ ಸಮೀಪಸ್ಥೆ**

**ದಿಕ್ಕೃತಮಪರತ್ವಂ । ಜ್ಯೇಷ್ಠೇ ಕಾಲಕೃತಂ ಪರತ್ವಂ, ಕನಿಷ್ಠೇ ಕಾಲ ಕೃತಮಪರತ್ವಂ ।**

ಬಾ. ಬೋ :- ಪರತ್ವಾಪರತ್ವ ಲಕ್ಷಣ ಹೇಳುತ್ತಾರೆ.
ಅಯಂ ಅಸ್ಮಾತ್ ಪರಃ ಇತ್ಯಾಕಾರಕ ವ್ಯವಹಾರಾ ಸಾಧಾರಣ ಕಾರಣವೇ ಪರತ್ವವು ಯಥಾ :- ಉದಾ :- ಈ ದೇವದತ್ತನು ಈ ಯಜ್ಞದತ್ತನಿಂದ ಜೇಷ್ಠನು ಇದರಂತೆ ಕನಿಷ್ಠನೆಂಬಲ್ಲಿ ತಿಳಿಯಬೇಕು. ಜೇಷ್ಠನು (ಹಿರಿಯನು) ಎಂಬ ವ್ಯವಹಾರಕ್ಕೆ ಅಸಾಧಾರಣ ಕಾರಣವಾದದ್ದೇ ಪರತ್ವವು . ಇವನು ಅವನಿಂದ ಅಪರನು (ಕನಿಷ್ಠನು) ಎಂಬ ಅಸಾಧಾರಣ ಕಾರಣ ವಾದದ್ದೇ ಅಪರತ್ವವು. ಈ ಪರತ್ವಾಪರತ್ವಗಳು ಎರಡು ಪ್ರಕಾರ ೧) ದಿಕ್ ಕೃತ್ (ದೇಶಕೃತ ಪರತ್ವಾ ಪರತ್ವಗಳು ) ೨) ಕಾಲಕೃತ ಪರತ್ವಾಪರತ್ವಗಳಕು. ದಿಕ್ ಕೃತ ಪರತ್ವಾ ಪರತ್ವಗಳಿಗೆ ಉದಾ :- ದೂರದಲ್ಲಿದ್ದವನಲ್ಲಿ ದಿಕ್‌ಕೃತ ಪರತ್ವವಿದೆ. ಸಮೀಪದಲ್ಲಿದ್ದವನಲ್ಲಿ ದಿಕ್‌ಕೃತ ಅಪರತ್ವವಿದೆ. ಇದೇ ಪ್ರಕಾರ ಜೇಷ್ಠನಲ್ಲಿ ಕಾಲಕೃತಪರತ್ವವು, ಕನಿಷ್ಠನಲ್ಲಿ ಕಾಲಕೃತಾಪರತ್ವವು ಇದೆ ಎಂದು ತಿಳಿಯಬೆಕು.

**ತ.ಸ. :- ಆದ್ಯಪತನಾऽಸಮವಾಯಿಕಾರಣಂ ಗುರುತ್ವಂ ಪೃಥಿವೀಜಲವೃತ್ತಿ ।**

ಬಾ. ಬೋ : -ಗುರುತ್ವ ಲಕ್ಷಣ ಹೇಳುತ್ತಾರೆ.
ಆದ್ಯ ಪತನಸ್ಯ ಅಸಮವಾಯಿಕಾರಣಂ ಗುರುತ್ವಂ ಹೇಗೆಂದರೆ ಉದಾ:- ತಾಲಫಲದಲ್ಲಿ ಪ್ರಥಮದಲ್ಲಿ ಪತನಕ್ರಿಯಾ ಹುಟ್ಟುತ್ತದೆ. ಈ ಕ್ರಿಯೆಯನ್ನು ಕುರಿತು ಗುರುತ್ವವು ಅಸಮ ವಾಯಿಕಾರಣವು. ಅಸಮವಾಯಿಕಾರಣವೇಂದರೆ ಕಾರ್ಯೇಣಸಹ ಏಕ ಸ್ಮಿನ್ನರ್ಥೇ ಸಮವೇತತ್ವೇ ಸತಿ ಕಾರಣಂ ಹಿ ಅಸಮವಾಯಿಕಾರಣಂ ಅರ್ಥ:- ಕಾರ್ಯಂ -ಪತನಕ್ರಿಯೆ ಈ ಪತನಕ್ರಿಯೆಯು ಫಲದಲ್ಲಿ ಸಮವಾಯ ಸಂಭಂದದಿಂದ ಇರುತ್ತದೆ. ಹಾಗೂಕಾರಣಂ -ಗುರುತ್ವವು (ಫಲಪತನಕ್ಕೆ ಕಾರಣವಾದ ಗುರುತ್ವವು) ಫಲದಲ್ಲಿ ಸಮ ವೇತವಾಗಿದ್ದೇ ಸಮವಾಯ ಸಂಭಂದದಿಂದ್ದಿದ್ದೇ ಕಾರಣವಾಗುತ್ತದೆ. ಈ ಕಾರಣದಿಂದ ಆದ್ಯಪತನಕ್ಕೆ ಅಸಮವಾಯಿ ಕಾರಣವಾಗಿರುತ್ತದೆ. ಈ ಗುರುತ್ವವು ಪೃಥಿವೀ ಜಲದಲ್ಲಿ ಇರುತ್ತದೆ.

**ತ. ಸ. :- ಆದ್ಯಸ್ಯಂದನಾऽಸಮವಾಯಿಕಾರಣಂ ದ್ರವತ್ವಂ । ಪೃಥಿವಿ ಅಪ್ ತೇಜೋವೃತ್ತಿ । ತದ್‌ದ್ವಿವಿಧಂ ಸಾಂಸಿದ್ಧಕಂ ನೈಮಿತ್ತಿಕಂ ಚ । ಸಾಂಸಿದ್ಧಕಂ ಜಲೇ । ನೈಮಿತ್ತಿಕಂ ಪೃಥಿವ್ಯಪ್ತೇಜಸೋಃ । ಪೃಥಿವ್ಯಾಂ**

**ಘೃತಾದೌ ಅಗ್ನಿ ಸಂಯೋಗ ಜನ್ಯಂ ದ್ರವತ್ವಂ ತೇಜಸಿ ಸುವರ್ಣಾದೌ ।**

ಬಾ. ಬೋ :- ಆದ್ಯಸ್ಯಂದನ (ಮೊದಲ ನಿರು ಹರಿಯುದಕ್ಕೆ) ಯಾವದು ಅಸಮವಾಯಿಕಾರಣವಾಗುತ್ತದೆಯೋ ಅದು ದ್ರವತ್ವವು (ಹೇಗೆಂದರೆ ಕಾರ್ಯೆಣ ಪ್ರಥಮ ಸ್ಯಂದನದಿಂದ ಸಹ (ಕೂಡಿ) ಏಕಸ್ಮನ್ನರ್ಥೇ ಜಲರೂಪ ಅರ್ಥದಲ್ಲಿ ಸಮವೇತವಾಗಿ ಸಮವಾಯ ಸಂಬಂಧದಿಂದ ಇದ್ದು ದ್ರವತ್ವವು ಅಸಮವಾಯಿ ಕಾರಣವಾಗಿದೆ. ಈ ಕಾರಣದಿಂದ ದ್ರತ್ವವು ಅಸಮವಾಯಿ ಕಾರಣವಾಗಿದೆ. ಈ ದ್ರವತ್ವವು ಎರಡು ವಿಧ ಸಾಂಸಿದ್ಧಕ, ಹಾಗೂ ನೈಮಿತ್ತಿಕ. ಸಾಂಸಿದ್ಧಿಕವು ಜಲದಲ್ಲಿರುತ್ತದೆ (ಸಾಂಸಧ್ಧಿಕವೆಂದರೆ ನಿಮಿತ್ತಕಾರಣ ಅಪೇಕ್ಷಿಸದೇ ಹರಿಯುವ ದ್ರವವು ಸ್ವಾಭಾವಿಕವೆಂಬ ಅಭಿಪ್ರಾಯ) ನೈಮಿತ್ತಿಕ ವೆಂದರೆ ತೇಜಸ್ಸಿನ (ಅಗ್ನಿಯ) ಸಂಯೋಗದಿಂದ ಜನ್ಯವಾದ ದ್ರವವು. ಇದು ಘೃತಾದಿಗಳಲ್ಲಿ ಹಾಗೂ ಸುವರ್ಣಾದಿಗಳಲ್ಲಿ ಇರುತ್ತದೆ.

**ತ.ಸ.:- ಚೂರ್ಣಾದಿಪಿಂಡೀಭಾವ ಹೇತುರ್ಗುಣಃ ಸ್ನೇಹಃ । ಜಲಮಾತ್ರ ವೃತ್ತಿಃ ।**

ಬಾ. ಬೋ:- ಚೂರ್ಣ ಆಂದರೆ ಪಿಷ್ಟಂ ಸ ಏವ ಹೇತುಃ ಯಸ್ಯ ಸಃ ತಸ್ಯ ಪಿಂಡೀಭಾವಃ (ಸಂಯೋಗ ವಿಶೇಷಃ) ತಸ್ಯ ನಿಮತ್ತಕಾರಣಂ ಯೋ ಗುಣಃ ಸಃ ಸ್ನೇಹಃ ಚೂರ್ಣಾದಿ ಪಿಂಡೀಭಾವ ಎಂದರೆ ಚೂರ್ಣಾದಿ ಧಾರಣಾಕರ್ಷಣಕಾರಣವಾದ ವಿಲಕ್ಷಣ ಸಂಯೋಗವು ಅಭಿಪ್ರಾಯವೇನೆಂದರೆ - ಚೂರ್ಣವೇ ಯಾವ ಮೃತ್ತಿಕಾದಿಗಳಿಗೆ ಹೇತುವು ಆಗಿದೆಯೋ ಆ ಚೂರ್ಣಾದಿಗಳು ಇದರ ಪಿಂಡೀಭಾವಕ್ಕೆ ಯಾವದು ನಿಮಿತ್ತ ಕಾರಣವಾಗಿದೆಯೋ ಆದೇ ಸ್ನೇಹವು ಎಂಬ ಭಾವ. ಇದು ಜಲದಲ್ಲಿ ಮಾತ್ರ ಇರುತ್ತದೆ.

**ತ.ಸ.:- ಶ್ರೋತ್ರ ಗ್ರಾಹ್ಯೋ ಗುಣಃ ಶಬ್ದಃ । ಆಕಾಶಮಾತ್ರ ವೃತ್ತಿಃ । ಸ ದ್ವಿವಿಧಃ ಧ್ವನ್ಯಾತ್ಮಕೋ ವರ್ಣಾತ್ಮಕಶ್ಚೇತಿ । ಧ್ವನ್ಯಾತ್ಮಕೋ ಭೇರ್ಯಾದೌ। ವರ್ಣಾತ್ಮಕಃ ಸಂಸ್ಕೃತಭಾಷಾದಿರೂಪಃ ।**

ಬಾ. ಬೋ:- ಶಬ್ದದ ಲಕ್ಷಣ ಹೇಳುತ್ತಾರೆ.

ಶ್ರೋತ್ರೇಂದ್ರಿಯದಿಂದ ಹುಟ್ಟಿದ ಜ್ಞಾನ, ಅಯಂ ಶಬ್ದಃ ಎಂಬ ಜ್ಞಾನ ಈ ಜ್ಞಾನಕ್ಕೆ ವಿಷಯವಾಗಿದೆ ಹಾಗೂ ಗುಣವಾಗಿದೆ ಶಬ್ದವು. ಕಾರಣ ಶಬ್ದದಲ್ಲಿ ಲಕ್ಷಣ ಸಮನ್ವವು

ಈ ಶಬ್ದವು ಎರಡು ಪ್ರಕಾರ ಧ್ವನ್ಯಾತ್ಮಕವು ಹಾಗೂ ವರ್ಣಾತ್ಮಕವು. ಧ್ವನ್ಯಾತ್ಮಕ ಶಬ್ದವು ಭೇರ್ಯಾದಿಗಳಲ್ಲಿ (ನಗಾರಿ ಮೊದಲಾದವುಗಳಲ್ಲಿ) ವರ್ಣಾತ್ಮಕ ಶಬ್ದವು ಸಂಸ್ಕೃತ ಭಾಷಾರೂಪವು ಆಗಿದೆ. ಈ ಎರಡು ವಿಧ ಶಬ್ದಗಳೂ ಪುನಃ ಮುರು ಪ್ರಕಾರ ಇರುತ್ತದೆ. ೧) ಸಂಯೋಗಜ ಶಬ್ದ ೨) ವಿಭಾಗಜ ಶಬ್ದ ೩) ಶಬ್ದಜ ಶಬ್ದ ಎಂದು ಮೂರು ಪ್ರಕಾರ ಶಬ್ದಗಳು ಇರುತ್ತವೆ. ಇದಕ್ಕೆ ಉದಾಹರಣೆ ೧) ಭೇರಿ, ದಂಡ ಇವುಗಳು ಸಂಯೋಗದಿಂದ ಹುಟ್ಟಿದ್ದು ಅಂದರೆ ನಗಾರಿ ಹಾಗೂ ದಂಡ ಇವುಗಳ ಸಂಯೋಗದಿಂದ ಹುಟ್ಟಿದ ಶಬ್ದ (ಢಂ ಢಂ ಎಂಬ ಶಬ್ದವು) ಇದು ಸಂಯೋಗಜವು. ೨) ವಿಭಾಗಜ - ಬಿದರನ್ನು ಸೀಳುವಾಗ ಹುಟ್ಟಿದ ಚಟ ಚಟ ಎಂಬ ಶಬ್ದವು, ವಿಭಾಗಜವು (ಬಿದುರಿನ ವಿಭಾಗದಿಂದ ಹುಟ್ಟಿದ್ದು) ೩) ಶಬ್ದೋತ್ಪತ್ತಿ ಆಗುವ ಸ್ಥಲದಿಂದ ಕಿವಿಯ ರಂಧ್ರ ಪರ್ಯಂತರ ವೀಚೀತರಂಗ ನ್ಯಾಯದಿಂದಾಗಲಿ ಯಾವ ಶಬ್ದವು ಕಿವಿಗೆ ಕೇಳುತ್ತದೆಯೋ ಅದೇ ಶಬ್ದಜ ಶಬ್ದವೆಂದು ತಿಳಿಯಬೇಕು. ಇಲ್ಲಿ ಅಭಿಪ್ರಾಯವೇನೆಂದರೆ - ನಗಾರಿಯನ್ನು ಬಡಿಯುವ ಸ್ಥಲದಿಂದ ಹೊರಟ ಶಬ್ದವು ವೀಚೀತರಂಗ ನ್ಯಾಯದಿಂದ ಅಂದರೆ ಕೆರೆಯಲ್ಲಿ ಒಂದು ಕಲ್ಲು ಒಗೆದಾಗ್ಗೇ ಒಂದರೆ ಮೇಲೆ ಒಂದು ತರಂಗಗಳು ಭಿನ್ನಭಿನ್ನವಾಗಿ ಹೊರಟು ದಂಡೆಯ ಪರ್ಯಂತರ ಬರುತ್ತದೆ. ಇದೇ ವೀಚೀತರಂಗ ನ್ಯಾಯ ಹೀಗೆ ಮೊದಲಿನ ಶಬ್ದದಿಂದ ಇನ್ನೊಂದು ಶಬ್ದವು ಅದರಿಂದ ಇನ್ನೊಂದು ಶಬ್ದ ಹುಟ್ಟುವದೇ ಶಬ್ದಜ ಶಬ್ದವೆಂದು ಕರೆಯುತ್ತಾರೆ.

**ತ.ಸ. :- ಸರ್ವವ್ಯವಹಾರ ಹೇತುಃ ಗುಣಃ ಬುದ್ಧಿಃ । ಸಾ ದ್ವಿವಿಧಾ । ಸ್ಮೃತಿರನುಭವಶ್ಚ । ಸಂಸ್ಕಾರ ಮಾತ್ರ ಜನ್ಯಂ ಜ್ಞಾನಂ ಸ್ಮೃತಿಃ ತದ್ಭಿನ್ನಂ ಜ್ಞಾನಂ ಅನುಭವಃ । ಸಃ ದ್ವಿವಿಧಃ ಯಥಾರ್ಥೋಽಯಥಾರ್ಥಶ್ಚ ।**

ಬಾ. ಬೋ :- ಸರ್ವವ್ಯವಹಾರ : ಘಟಃ ಪಟಃ ಕುಂಡಃ ಇತ್ಯಾದಿವ್ಯವಹಾರವು (ಶಬ್ದ ಪ್ರಯೋಗವು) ಈ ವ್ಯವಹಾರಕ್ಕೆ ಅಸಾಧಾರಣ ಕಾರಣವಾದದ್ದೇ, ಬುದ್ಧಿಯು, ಈ ಬುದ್ಧಿಯು ಎರಡು ಪ್ರಕಾರ, ಸ್ಮೃತಿಯು ಹಾಗೂ ಅನುಭವವು, ಸ್ಮೃತಿ ಎಂದರೆ ಸಂಸ್ಕಾರ ಮಾತ್ರದಿಂದ ಹುಟ್ಟಿದ ಜ್ಞಾನವು. ಈ ಸ್ಮೃತಿ ಭಿನ್ನವಾದದ್ದೇ ಅನುಭವವು. ಈ ಅನುಭವವು ಎರಡು ಪ್ರಕಾರವಾಗಿದೆ. ಯಥಾರ್ಥವು ಹಾಗೂ ಅಯಥಾರ್ಥವು.

**ತ.ಸ. :- ತದ್ವತಿ ತತ್ಪ್ರಕಾರಕೋಽನುಭವೋ ಯಥಾರ್ಥಃ । ಯಥಾ ರಜತೇ ಇದಂ ರಜತಮಿತಿ ಜ್ಞಾನಂ । ಸೈವ ಪ್ರಮಾ ಇತ್ಯುಚ್ಯತೇ ।**

ಬಾ. ಬೋ :- ಯಥಾರ್ಥಾನುಭವವನ್ನು ಹೇಳುತ್ತಾರೆ.

ತದ್ವತಿ ತತ್ಪ್ರಕಾರ ಃ ಯಸ್ಯಸ ಃ ತದ್ವತಿತತ್ಪ್ರಕಾರಕ ಃ (ಸಃ ಅನುಭವ ) ಇದರ ಲಕ್ಷಣ ಸಮನ್ವಯವು - ಇದಂ ರಜತಂ ಎಂಬ ಜ್ಞಾನದಲ್ಲಿ ತದ್ವತಿ - ರಜತತ್ವವತಿ ( ರಜತತ್ವವುಳ್ಳ ರಜತದಲ್ಲಿ) ರಜತತ್ವಪ್ರಕಾರಕ ಜ್ಞಾನವೇ ಯಥಾರ್ಥಾನುಭವವು. ತಥಾಚ ರಜತ ವಿಶೇಷ್ಯಕ ರಜತತ್ವಪ್ರಕಾರಕ ಜ್ಞಾನವೇ ಅನುಭವವು ಎಂಬ ಭಾವ , ಇದೇ ಪ್ರಮಾ ಎಂದು ಕರೆಯಲ್ಪಡುತ್ತದೆ.

**ತ. ಸ.: - ತದಭಾವವತಿ ತತ್ಪ್ರಕಾರಕೋಽನುಭವೋಽ ಯಥಾರ್ಥಃ । ಯಥಾ ಶುಕ್ತೌ ಇದಂ ರಜತಮಿತಿ ಜ್ಞಾನಂ ಸೈವಾಪ್ರಮೇತ್ಯುಚ್ಯತೇ ।**

ಬಾ. ಬೋ :- ರಜತತ್ವಾಭಾವವುಳ್ಳ ಶುಕ್ತಿಯಲ್ಲಿ (ಸಿಂಪಿನಲ್ಲಿ) ರಜತತ್ವಪ್ರಕಾರಕ ಜ್ಞಾನವೇ ಅಯಥಾರ್ಥವು ಈ ಜ್ಞಾನವು ಅಪ್ರಮಾ ಎಂದು ಕರೆಯಲ್ಪಡುತ್ತದೆ.

**ತ.ಸ. :- ಯಥಾರ್ಥಾನುಭವಶ್ಚತುರ್ವಿಧಃ । ಪ್ರತ್ಯಕ್ಷ ಅನುಮಿತಿ ಉಪಮಿತಿ ಶಾಬ್ದ ಭೇದಾತ್ । ತತ್ಕರಣಮಪಿ ಚತುರ್ವಿಧಂ । ಪ್ರತ್ಯಕ್ಷಾನುಮಾನ ಉಪಮಾನ ಶಬ್ದ ಭೇದಾತ್ ।**

ಬಾ. ಬೋ :- ಯಥಾರ್ಥಾನುಭವದ ವಿಭಾಗ ಹೇಳುತ್ತಾರೆ.

ಯಥಾರ್ಥದ ಅನುಭವವು ನಾಲ್ಕು ಪ್ರಕಾರ ಇರುತ್ತದೆ. ( ಚಕ್ಷುರಿಂದ್ರಿಯ ಜನ್ಯ ಪ್ರತ್ಯಕ್ಷವು, ಅನುಮಿತಿಯು , ಉಪಮಿತಿ ಹಾಗೂ ಶಬ್ದಜನ್ಯ ಜ್ಞಾನವು ಇವುಗಳಿಗೆ ಕಾರಣಗಳು (ಜನಕಗಳು) ಅವು ನಾಲ್ಕು ಪ್ರಕಾರಗಳು , ಪ್ರತ್ಯಕ್ಷ ಇಂದ್ರಿಯ ಅನುಮಾನ (ಲಿಂಗಜ್ಞಾನವು), ಉಪಮಾನವು (ಸಾದೃಶ್ಯಜ್ಞಾನವು) , ಹಾಗೂ ಶಬ್ದ ಹೀಗೆ ಜ್ಞಾನ ಕರಣಗಳು ನಾಲ್ಕು ಪ್ರಕಾರಗಳಿರುತ್ತವೆ.

**ತ.ಸ.:- ವ್ಯಾಪಾರವದಸಾಧಾರಣಂ ಕಾರಣಂ ಕರಣಂ। ಕಾರ್ಯನಿಯತ ಪೂರ್ವವೃತ್ತಿ ಕಾರಣಂ ಕಾರ್ಯಂ ಪ್ರಾಗಭಾವ ಪ್ರತಿಯೋಗಿ ।**

ಬಾ. ಬೋ :- ಕರಣ ಹಾಗು ಕಾರ್ಯದ ಲಕ್ಷಣ ಹೇಳಲಾಗುತ್ತದೆ . ವ್ಯಾಪಾರವುಳ್ಳ

ಅಸಾಧಾರಣ ಕಾರಣವೇ ಕರಣವು ವ್ಯಾಪಾರ ಅಂದರೆ ತಜ್ಜನ್ಯತ್ವೇ ಸತಿ ತಜ್ಜನ್ಯಜನಕತ್ವಂ (ದಂಡದಿಂದ ಘಟವು ಹುಟ್ಟುತ್ತದೆ. ಆದರೆ ದಂಡವು ಚಕ್ರಭ್ರಮಣರೂಪ ವ್ಯಾಪಾರ ಉಳ್ಳದ್ದಾಗಿ, ಘಟಕ್ಕೆ ಕರಣವಾಗುತ್ತದೆ.) ಇಲ್ಲಿ ಚಕ್ರಭ್ರಮಣವೇ ವ್ಯಾಪಾರವು (ಈ ವ್ಯಾಪಾರದಲ್ಲಿ ಲಕ್ಷಣ ಸಮನ್ವಯ ಹೇಗೆಂದರೆ ತತ್ = ದಂಡ ಃ ತಜ್ಜನ್ಯವಾಗಿದೆ ಚಕ್ರಭಮ್ರಣವು ಚಕ್ರ ಭ್ರಮಣದಲ್ಲಿ ತಜ್ಜನ್ಯತ್ವ ಬಂದೀತು. ಹಾಗೂ ಈ ಚಕ್ರಭ್ರಮಣವು ತಜ್ಜನ್ಯಜನಕವೂ ಆಗಿದೆ. ಹೇಗೆಂದರೆ ತತ್ = ದಂಡವು, ತಜ್ಜನ್ಯ ವಾಗಿದೆ. ಘಟವು( ಈ ಘಟಕ್ಕೆ ) ಜನಕವಾಗಿದೆ . ಚಕ್ರಭ್ರಮಣ ಈ ಚಕ್ರಭ್ರಮಣದಲ್ಲಿ ತಜ್ಜನ್ಯ ಜನಕತ್ವ ಬರುವದರಿಂದ ಲಕ್ಷಣ ಸಮನ್ವಯವಾಗುತ್ತದೆ . (ಘಟಕ್ಕೆ ದಂಡವೇ ಅಸಾಧಾರಣ ಕಾರಣವಾದ್ದರಿಂದ ಅದು ಕರಣವು ಕುಲಾಲಾದಿಗಳು ಸಾಧಾರಣ ಕಾರಣರು ಕಾರಣ ಯಾವುದು ಅಂದರೆ -ಕಾರ್ಯವಾದ ಘಟಕ್ಕೆ ನಿಯತ ಪೂರ್ವವೃತ್ತಿ ಆಗಿರುವದೇ ಕಾರಣವು. (ಅಭಿಪ್ರಾಯವೆನೆಂದರೆ ಘಟ ರೂಪಕಾರ್ಯವನ್ನು ಕುರಿತು ಅನನ್ಯಥಾ ಸಿದ್ಧನಿಯಮೇನ ಪೂರ್ವ ಕ್ಷಣ ವೃತ್ತಿಯಾದುದೇ ಕಾರಣವು ಕಾರ್ಯ ಅಂದರೆ - ಪ್ರಾಗಭಾವಕ್ಕೆ ಪ್ರತಿಯೋಗಿ ಆಗಿರುವದೇ ಕಾರ್ಯವಾಗಿದೆ . ಹೇಗೆಂದರೆ :- ಇಹ ಘಟೋ ಭವಿಷ್ಯತಿ ಇತ್ಯಾಕಾರಕ ಪ್ರತೀತಿಯು ಹುಟ್ಟುತ್ತದೆ (ಇಲ್ಲಿ ಕಪಾಲದಲ್ಲಿ ಘಟವು ಹುಟ್ಟುತ್ತದೆ ಎಂಬ ಜ್ಞಾನವು ಬರುತ್ತದೆ ). ಈ ಪ್ರತೀತಿಗೆ ವಿಷಯವಾದದ್ದೇ ಪ್ರಾಗಭಾವವು. (ಘಟ ಹುಟ್ಟುವ ಪೂರ್ವದಲ್ಲಿರುವ ಅಭಾವವು) ಈ ಅಭಾವಕ್ಕೆ ಪ್ರತಿಯೋಗಿ ಆಗಿರುವ ಘಟವೇ ಕಾರ್ಯವು ಎಂದು ಅರ್ಥ .

**ತ.ಸ. :- ಕಾರಣಂ ತ್ರಿವಿಧಂ । ಸಮವಾಯ್ಯ ಸಮವಾಯಿ ನಿಮಿತ್ತ ಭೇದಾತ್ । ಯತ್ಸಮವೇತಂ ಕಾರ್ಯಮುತ್ಪದ್ಯತೇ ತತ್ಸಮ ವಾಯಿಕಾರಣಂ । ಯಥಾ ತಂತವಃ ಪಟಸ್ಯ ಪಟಶ್ಚ ಸ್ವಗತರೂಪಾದೇಃ। ಕಾರ್ಯೇಣ ಕಾರಣೇನ ವಾ ಸಹ ಏಕಸ್ಮಿನ್ನರ್ಥೆ ಸಮವೇತತ್ವೇ ಸತಿ ಕಾರಣಂ ಅಸಮವಾಯಿ ಕಾರಣಂ । ಯಥಾ ತಂತು ಸಂಯೋಗಃ ಪಟಸ್ಯ। ತಂತುರೂಪಂ ಪಟರೂಪಸ್ಯ ।**

ಬಾ.ಬೋ: - ಕಾರಣವು - ಸಮವಾಯಿಕಾರಣ, ಅಸಮವಾಯಿಕಾರಣ, ನಿಮಿತ್ತಕಾರಣ ಎಂದು ಮೂರು ಪ್ರಕಾರ ಇರುತ್ತದೆ . ಯತ್ಸಮವೇತಂ ಕಾರ್ಯಮುತ್ಪದ್ಯತೇ ತತ್ಸಮವಾಯಿಕಾರಣಂ, ಯತ್ಸಮವೇತಂ, ಯಸ್ಮಿನ್ ಸಮವೇತಂ ಕಾರ್ಯಂ ಉತ್ಪದ್ಯತೇ

ತತ್ ಸಮವಾಯಿಕಾರಣಂ (ಯಾವುದರಲ್ಲಿ ಸಮವಾಯಿ ಸಂಬಂಧದಿಂದ ಇದ್ದು ಕಾರ್ಯವು ಹುಟ್ಟುತ್ತದೆಯೋ ಅದೇ ಸಮವಾಯಿಕಾರಣವು) ಉದಾ :- ತಂತುಗಳು ಪಟಕ್ಕೆ ಸಮವಾಯಿ ಕಾರಣವು, ಹೇಗೆಂದರೆ ತಂತುಗಳಲ್ಲಿ ಸಮವಾಯ ಸಂಭಂದದಿಂದ ಇದ್ದು ಪಟಾತ್ಮಕಾರ್ಯ ಹುಟ್ಟುತ್ತದೆ ಕಾರಣ ತಂತುಗಳು ಪಟಕ್ಕೆ ಸಮವಾಯಿಕಾರಣವು ಆಗುತ್ತದೆ. ಅದರಂತೆ ಪಟಃ ಸ್ವಗತರೂಪಾದೇಃ (ಸಮವಾಯಿ ಕಾರಣಂ) ಈ ವಾಕ್ಯದ ವಿವರಣೆ:- ಇಲ್ಲಿ ಪಟವು ತನ್ನ ರೂಪಕ್ಕೆ ಸಮವಾಯಿ ಕಾರಣವಾಗುತ್ತದೆ. ಎಂದು ಹೇಳಿದೆ. ಇದರ ಮೇಲೆ ಹೀಗೆ ಪೂರ್ವ ಪಕ್ಷ ಮಾಡಲು ಬರುತ್ತದೆ. ಪಟವು ಹುಟ್ಟುವ ಕಾಲಕ್ಕೆ ರೂಪದಿಂದ ಕೂಡಿಯೇ ಹಟ್ಟುತ್ತದೆ. ಅಂದ ಮೇಲೆ ತನ್ನ ರೂಪಕ್ಕೆ ತಾನೇ (ಪಟವೇ) ಹೇಗೆ ಕಾರಣವಾಗುತ್ತದೆ? ಯಾವಾಗಲೂ ಕಾರಣವು ಕಾರ್ಯ ಪೂರ್ವ ವೃತ್ತಿ ಆಗಿರಬೇಕು (ಅಂದರೆ -ಕಾರ್ಯಕಾರಣಗಳೀಗೆ ಪೂರ್ವಾಪರೀಕಾರ ಇರಬೇಕೇ ಹೊರತು ಏಕಕಾಲದಲ್ಲಿ ಎರಡು ಇದ್ದಲ್ಲಿ ಅವುಗಳೀಗೆ ಕಾರ್ಯ ಕಾರಣಭಾವ ಕೂಡಲಾರದು ಎಂಬ ಭಾವ) ಹೀಗೆ ಪೂರ್ವ ಪಕ್ಷಮಾಡಿದಲ್ಲಿ ಇದಕ್ಕೆ ಸಮಾಧಾನವು:- '' ಉತ್ಪನ್ನಂ ದ್ರವ್ಯಂ ಕ್ಷಣಮ ಗುಣಮಕ್ರಿಯಾಕಂ ಚ ತಿಷ್ಠತಿ'' ಎಂಬ ನಿಮಾನುಸಾರ (ಹುಟ್ಟಿದ ದ್ರವ್ಯವು ಒಂದು ಕ್ಷಣ ಗುಣರಹಿತವಾಗಿ ಹಾಗೂ ಕ್ರಿಯಾರಹಿತವಾಗಿ ಇರುತ್ತದೆ. ಎರಡನೇ ಕ್ಷಣದಲ್ಲಿ ಪಟದಲ್ಲಿ ಗುಣಾದಿಗಳು ಬರುತ್ತವೆ. ಆದ್ದರಿಂದ ಪಟವು ರೂಪಕ್ಕೆ ಸಮವಾಯಿ ಕಾರಣವಾಗುತ್ತದೆ. ಪಟವು ತಾನು ಹುಟ್ಟಿದ ಪ್ರಥಮ ಕ್ಷಣದಲ್ಲಿ ಗುಣರಹಿತವಾಗಿಯೇ ಇದ್ದು ನಂತರ ತನ್ನ ರೂಪಕ್ಕೆ ಸಮವಾಯಿ ಕಾರಣವಾಗುತ್ತದೆ. (ಅಂದರೆ ಪಟವು ಸ್ವಯಂ ಪ್ರಥಮದಲ್ಲಿ ಗುಣರಹಿತವಾಗಿ ಹುಟ್ಟಿ ಎರಡನೇ ಕ್ಷಣದಲ್ಲಿ ತನ್ನ ರೂಪಕ್ಕೆ (ಪಟವು) ಕಾರಣವಾಗುತ್ತದೆ. ಆದ್ದರಿಂದ ಪಟರೂಪಗಳಿಗೆ ಸಮಾನ ಕಾಲೀನತ್ವ ಇರುವದಿಲ್ಲ ಕಾರಣ ಅವುಗಳಿಗೆ ಕಾರ್ಯಕಾರಣ ಭಾವ ಕೂಡುತ್ತದೆ. ಒಂದು ಪಕ್ಷ ಪಟವು ಪ್ರಥಮ ಕ್ಷಣದಲ್ಲಿ ನಿರ್ಗುಣವಾಗಿ ಹುಟ್ಟಿದಲ್ಲಿ ಪಟವು ದ್ರವ್ಯ ವಾಗದೇ ಹೋಗಲಿ ಯಾಕೆಂದರೆ'' ಗುಣಾಶ್ರಯತ್ವಂ ದ್ರವ್ಯತ್ವಂ'' ಎಂದು ದ್ರವ್ಯದ ಲಕ್ಷಣ ಇರುವದರಿಂದ ಪ್ರಥಮಕ್ಷಣದಲ್ಲಿ ಹುಟ್ಟಿದ ಪಟದಲ್ಲಿ ಗುಣ ಇಲ್ಲವಾದ್ದರಿಂದ ಗುಣಾಶ್ರಯತ್ವ ಲಕ್ಷಣ ಬರಲಿಲ್ಲವಾದ ಕಾರಣ ಪಟವು ದ್ರವ್ಯವಾಗದೇ ಹೋಗಬೇಕಾದಿತು ಎಂಬ ಶಂಕಾ ಬಂದೇ ಬರುತ್ತದೆ ಹಾಗೂ ರೂಪರಹಿತವಾದ ವಾಯವೂ ಹೇಗೆ ಪ್ರತ್ಯಕ್ಷವಲ್ಲವೋ ಆದರಂತೆ ರೂಪರಹಿತವಾದ ಪಟವು ಪ್ರಥಮ ಕ್ಷಣದಲ್ಲಿ ದ್ರವ್ಯವಾಗದೇ ಮತ್ತು ಪ್ರತ್ಯಕ್ಷವೂ ಆಗದೇ ಹೋಗಲಿ ಎಂಬ ಸಂಶಯ ಬಂದಲ್ಲಿ ಹೀಗೆ ಉತ್ತರ ಇರುತ್ತದೆ :- ಪಟಕ್ಕೆ ಗುಣಾಶ್ರಯತ್ವ ಲಕ್ಷಣವು (ಪ್ರಥಮ ಕ್ಷಣದಲ್ಲಿ) ಬರದಿದ್ದರೂ '' ಸಮವಾಯಿಕಾರಣತ್ವಂ ದ್ರವ್ಯತ್ವಂ ''

ಎಂಬ ದ್ರವ್ಯದ ಎರಡನೇ ಲಕ್ಷಣ ಬರುವದರಿಂದ ಪಟವು ದ್ರವ್ಯವೇ ಆಗುತ್ತದೆ. ಈ ಕಾರಣದಿಂದಲೇ ತರ್ಕ ಸಂಗ್ರಹದಲ್ಲಿ ಗುಣಾಶ್ರಯತ್ವಂ ದ್ರವ್ಯತ್ವಂ ಎಂದು ಲಕ್ಷಣ ಹೇಳಿ ನಂತರ ಸಮವಾಯಿ ಕಾರಣತ್ವಂ ವಾ ದ್ರವ್ಯತ್ವಂ ಎಂದು ಲಕ್ಷಣ ಹೇಳಿದ್ದಾರೆ. ಏವಂ ಚ ಪ್ರಥಮ ಲಕ್ಷಣವು ಪಟದಲ್ಲಿ ಬರದಿದ್ದರೂ ಎರಡನೇಯದಾದ ಸಮವಾಯಿಕಾರಣತ್ವವು ಪಟವು ತನ್ನ ರೂಪಕ್ಕೆ ಸಮವಾಯಿಕಾರಣವಾದ್ದರಿಂದ ಸಮವಾಯಿಕಾರಣತ್ವ ಲಕ್ಷಣ ಪಟಕ್ಕೆ ಬರುವದರಿಂದ ಪಟವು ದ್ರವ್ಯ ಆಗುತ್ತದೆ. ಪಟವು ಪ್ರಥಮ ಕ್ಷಣದಲ್ಲಿ ರೂಪರಹಿತವಾಗಿರುವದರಿಂದ ರೂಪರಹಿತವಾದ ವಾಯುವಿನಂತೆ ಪ್ರತ್ಯಕ್ಷವಾಗದಲೇ ಹೋಗಲಿ ಎಂಬ ಪೂರ್ವ ಪಕ್ಷವು ನಮಗೆ ಇಷ್ಟವೆ ಆಗಿರುತ್ತದೆ. ಸಗುಣವಾದಿಗಳೂ ಸಹ ನಿಮಿಷಾಂತರದಲ್ಲಿ ಪಟವು ಪ್ರತ್ಯಕ್ಷವಾಗುವದಿಲ್ಲವೆಂದು ಒಪ್ಪಿದ್ದಾರೆ. ಎರಡನೇ ಕ್ಷಣದಲ್ಲಿ ಪಟದಲ್ಲಿ ರೂಪಬರುವದರಿಂದ ಪಟವು ಪ್ರತ್ಯಕ್ಷ ವಾಗುತ್ತದೆ ಎಂದು ಹೇಳಿದಲ್ಲಿ ಯಾವ ಅನುಪಪತ್ತಿಗಳು ಇಲ್ಲವೆಂದು ತಿಳಿಯಬೇಕು.

ಎರಡನೇ ಸಮವಾಯಿಕಾರಣದ ಲಕ್ಷಣ :- **ಕಾರ್ಯೇಣ ಕಾರಣೇನ ವಾ ಸಹ ಏಕಸ್ಮಿನ್ನರ್ಥೇ ಸಮವೇತಂ ಸತ್ ಕಾರಣಂ ಅಸಮವಾಯಿಕಾರಣಂ ಯಥಾ ತಂತು ಸಂಯೋಗಃ ಪಟಸ್ಯ ತಂತುರೂಪಂ ಪಟಗತ ರೂಪಸ್ಯ**

ಬಾ. ಬೋ :- ಇಲ್ಲಿ ಕಾರ್ಯೇಣ ಕಾರಣೇನ ವಾ ಎಂದು ಹೇಳಿದ್ದರಿಂದ ಎರಡು ಅಸಮವಾಯಿಕಾರಣಗಳೆಂದು ಹೇಳಿದೆ. ಇವೆರಡರನ್ನು ಪ್ರತ್ಯೇಕವಾಗಿ ಮಾಡಿ ಲಕ್ಷಣ ಸಮನ್ವಯ ಮಾಡಲಾಗುತ್ತದೆ.

೧) ಕಾರ್ಯೇಣ ಸಹ ಏಕಸ್ಮಿನ್ನರ್ಥೇ ಸಮವೇತಂ ಸತ್ ಕಾರಣಂ ಅಸಮವಾಯಿ ಕಾರಣಂ ಯಥಾ:- ತಂತು ಸಂಯೋಗಃ ಪಟಕ್ಕೆ ಅಸಮವಾಯಿ ಕಾರಣವು ಹೇಗೆಂದರೆ ಕಾರ್ಯೇಣ - ಪಟಾತ್ಮಕ ಕಾರ್ಯದಿಂದ ಸಹ - ಕೂಡಿ ಏಕಸ್ಮಿನ್ನರ್ಥ-(ತಂತುವಿನಲ್ಲಿ) ಸಮವೇತಂ ಸತ್ - ಸಮವಾಯ ಸಂಬಂಧದಿಂದ ಇರುವದಾಗಿ ತಂತು ಸಂಯೋಗವು ಪಟಕಾರ್ಯವನ್ನು ಕುರಿತು ಅಸಮವಾಯಿಕಾರಣವಾಗುತ್ತದೆ. ಅಭಿಪ್ರಾಯವೇನೆಂದರೆ - ತಂತುವಿನಲ್ಲಿ ಪಟವು (ಅವಯವ ಅವಯವಿಗಳಿಗೆ ಸಮವಾಯ ಎಂಬ ನಿಯಮದಂತೆ) ಅವಯವಾದ ತಂತುವಿನಲ್ಲಿ ಅವಯವಿಯಾದ ಪಟವು ಸಮವಾಯ ಸಂಬಂಧದಿಂದ ಇರುತ್ತದೆ. ಅದೇ ತಂತುವಿನಲ್ಲಿ (ಗುಣ ಗುಣಿನೋಃ ಸಮವಾಯಃ) ಗುಣ ಗುಣಿಗಳಿಗೆ ಸಮವಾಯವೆಂಬ ನಿಯಮದಂತೆ ಗುಣವಾದ ತಂತು ಸಂಯೋಗವು ಗುಣಿಯಾದ ತಂತುವಿನಲ್ಲಿ ಇದ್ದು ಪಟಕಾರ್ಯಕ್ಕೆ ಕಾರಣವಾಗುತ್ತದೆ. ಆದ್ದರಿಂದ ತಂತು ಸಂಯೋಗವು ಪಟ ಕಾರ್ಯವನ್ನು ಕುರಿತು ಅಸಮವಾಯಿಕಾರಣವಾಗುತ್ತದೆ.

೨) ಎರಡನೇ ಅಸಮವಾಯಿ ಕಾರಣವು :- ಕಾರಣೇನ - ಸ್ವಕಾರ್ಯ ಕಾರಣೇನ ಸಹ ಏಕಸ್ಮಿನ್ನರ್ಥೇ ಸಮವೇತಂ ಸತ್ ಕಾರಣಂ ಅಸಮವಾಯಿಕಾರಣಂ. ಯಥಾ :- ತಂತು ರೂಪಂ ಪಟ ರೂಪಸ್ಯ ಹೇಗೆಂದರೆ - ಸ್ವಂ - ತಂತುರೂಪವು ತಸ್ಯ (ತಂತು ರೂಪದ) ಕಾರ್ಯಂ - ಪಟರೂಪವು, ಈ ಪಟರೂಪಕ್ಕೆ (ತಸ್ಯ) ಸಮವಾಯಿ ಕಾರಣಂ - ಪಟವು ( ಇದರ ಅಭಿಪ್ರಾಯ :- ತಂತುರೂಪಕಾರ್ಯವಾದ ಪಟರೂಪಕ್ಕೆ ಸಮವಾಯಿ ಕಾರಣ ಭೂತವಾದ ಪಟವು ಈ ಪಟವು ಸಮವಾಯ ಸಂಬಂಧದಿಂದ ತಂತುಗಳಲ್ಲಿ ಇರುತ್ತದೆ. ಇದೇ ತಂತುವಿನಲ್ಲಿ ತಂತು ರೂಪವು ಕೂಡ ಸಮವಾಯ ಸಂಬಂಧದಿಂದ ಇರುತ್ತದೆ. ಈ ಕಾರಣದಿಂದ ಪಟರೂಪವನ್ನು ಕುರಿತು ತಂತು ರೂಪವು ಅಸಮವಾಯಿ, ಕಾರಣ ವಾಗುತ್ತದೆ.

**ತ.ಸ. :- ತದುಭಯಭಿನ್ನಂ ಕಾರಣಂ ನಿಮಿತ್ತಕಾರಣಂ । ತುರಿವೇಮಾದಿಕಂ ಪಟಸ್ಯ ।**

ಬಾ. ಬೋ :- ಸಮವಾಯಿ ಕಾರಣ, ಅಸಮವಾಯಿಕಾರಣಗಳಿಂದ ಭಿನ್ನ ವಾಗಿರುವದೇ ನಿಮಿತ್ತಕಾರಣವು. ಉದಾ :- ಪಟವನ್ನು ಕುರಿತು ತುರಿಮೇವಾದಿಗಳು ನಿಮಿತ್ತಕಾರಣವು (ಆದಿಪದದಿಂದ ಕುಲಾಲನನ್ನು ತೆಗೆದುಕೊಳ್ಳಬೇಕು ).

**ತ.ಸ. :- ತದೇತತ್ ತ್ರಿವಿಧಕಾರಣ ಮಧ್ಯೇ ಯದಸಾಧಾರಣಂ ಕಾರಣಂ ತದೇವ ಕರಣಂ ।**

ಬಾ. ಬೋ :- ಪೂರ್ವೋಕ್ತ ಮೂರು ಕಾರಣಗಳ ಮಧ್ಯದಲ್ಲಿಯಾವದು ಅಸಾಧಾರಣ ಕಾರಣವೋ (ವ್ಯಾಪಾರವುಳ್ಳದ್ದಾಗಿ ಅಸಾಧಾರಣಕಾರಣವಾಗಿದೆಯೋ ) ಅದೇ ಕರಣವೆಂದು ತಿಳಿಯಬೇಕು ( ಉದಾ :- ಘಟದ ಉತ್ಪತ್ತಿಯನ್ನು ಕುರಿತು ಚಕ್ರಭ್ರಮಣ ರೂಪವ್ಯಾಪಾರವುಳ್ಳ ದಂಡವೇ ಅಸಾಧಾರಣ ಕಾರಣವಾದ್ದರಿಂದ ದಂಡವೇ ಕರಣವು)

**ತ.ಸ. :- ತತ್ರ ಪ್ರತ್ಯಕ್ಷ ಜ್ಞಾನ ಕರಣಂ ಪ್ರತ್ಯಕ್ಷಂ । ಇಂದ್ರಿಯಾರ್ಥ ಸನ್ನಿಕರ್ಷಜನ್ಯಂ ಜ್ಞಾನಂ ಪ್ರತ್ಯಕ್ಷಂ । ತದ್ವಿವಿಧಂ ನಿರ್ವಿಕಲ್ಪಕಂ, ಸವಿಕಲ್ಪ ಕಂ ಚ ।**

ಬಾ.ಬೋ. :- ನಾಲ್ಕು ಪ್ರಮಾಣಗಳ ಮಧ್ಯದಲ್ಲಿ ಪ್ರತ್ಯಕ್ಷಾತ್ಮಕಃ ಯತ್ ಜ್ಞಾನಂ ಅಯಂ ಘಟಃ ಎಂಬ ಚಾಕ್ಷುಷ ಪ್ರತ್ಯಕ್ಷಾತ್ಮಕಂ ಜ್ಞಾನಂ ಇದಕ್ಕೆ ವ್ಯಾಪಾರವದ ಸಾಧಾರಣಕಾರಣವಾಗಿರುವ ಇಂದ್ರಿಯ (ಅಂದರೆ ಚಕ್ಷುರಾದಿ ಇಂದ್ರಿಯವು ಕರಣ ಪ್ರತ್ಯಕ್ಷವು)

೨) ಫಲ ಪ್ರತ್ಯಕ್ಷ ಲಕ್ಷಣವು :- ಇಂದ್ರಿಯವೆಂದರೆ ಚಕ್ಷುರಾದಿಗಳು ಅರ್ಥ ಅಂದರೆ ಘಟಾದಿಗಳು ಇವುಗಳ ಸನ್ನಿಕರ್ಷದಿಂದ ಹುಟ್ಟಿದ ಅಯಂ ಘಟ ಎಂಬ ಜ್ಞಾನವೇ ಪ್ರತ್ಯಕ್ಷವು ಈ ಪ್ರತ್ಯಕ್ಷವು ಎರಡು ಪ್ರಕಾರ ನಿರ್ವಿಕಲ್ಪಕ ಸವಿಕಲ್ಪಕ ಎಂದು ಇರುತ್ತದೆ.

**ತ.ಸ. :- ತತ್ರನಿಷ್ಪ್ರಕಾರಕಂ ಜ್ಞಾನಂ ನಿರ್ವಿಕಲ್ಪಕಂ ಯಥಾ ಕಿಂಚಿದಿದಮಿತಿ ಸಪ್ರಕಾರಕ ಜ್ಞಾನಂ ಸವಿಕಲ್ಪಕಂ ಯಥಾ ಡಿಥ್ಥೋಽಯಂ ಬ್ರಾಹ್ಮಣೋಽಯಂ ಶ್ಯಾಮೋಽಯಮಿತಿ ।**

ಬಾ.ಬೋ :- ೧) ಪ್ರಕಾರತಾ ಶೂನ್ಯ ಜ್ಞಾನವೇ ( ಕೇವಲ ವಸ್ತು ವಿಷಯಿಕರಿಸತಕ್ಕ ಕಿಂಚಿದಿದಂ ಎಂಬ ಜ್ಞಾನವೇ ) ನಿರ್ವಿಕಲ್ಪಕವು. ಇಲ್ಲಿ ವಿಗ್ರಹವು :- (ವಿಕಲ್ಪ ಅಂದರೆ ವಿಶೇಷ್ಯ ವಿಶೇಷಣಭಾವವು ) ನಿರ್ಗತಃ ವಿಕಲ್ಪಃ ಯಸ್ಮಾತ್ ತತ್ ನಿರ್ವಿಕಲ್ಪಕಂ. ಏವಂಚ ವಿಶೇಷ್ಯ ವಿಶೇಷಣ ಭಾವ ಅನವಗಾಹಿಜ್ಞಾನ (ಅಂದರೆ ಯಾವ ಜ್ಞಾನದಲ್ಲಿ ವಿಶೇಷ್ಯ ವಿಶೇಷಣಭಾವವು ಇಲ್ಲವೋ ಅದೇ ಜ್ಞಾನವೇ ನಿರ್ವಿಕಲ್ಪಕವು ವಿಶೇಷ್ಯ ವಿಶೇಷಣ ಭಾವರಹಿತವಾಗಿ ಕೇವಲ ಇದು ವಸ್ತು ಎಂದು ವಸ್ತು ಮಾತ್ರ ಗ್ರಹಿಸತಕ್ಕ ಜ್ಞಾನವೇ ನಿರ್ವಿಕಲ್ಪಕವು.

೨) ಪ್ರಕಾರತಾಖ್ಯ ವಿಷಯತಾ ವಿಶಿಷ್ಟವಾದ ಜ್ಞಾನವೇ ಸಪ್ರಕಾರಕವು ಉದಾ :- ಡಿಥ್ಥ ವಿಶೇಷ್ಯಕ ಡಿಥ್ಥತ್ವ ಪ್ರಕಾರಕ, ಬ್ರಾಹ್ಮಣ ವಿಶೇಷ್ಯಕ ಬ್ರಾಹ್ಮಣತ್ವ ಪ್ರಕಾರಕ ಜ್ಞಾನವು ಅಥವಾ ಶ್ಯಾಮ ವಿಶೇಷ್ಯಕ ಶಾಮತ್ವ ಪ್ರಕಾರಕ ಜ್ಞಾನವೇ ಸವಿಕಲ್ಪಕವು ವಿವರಣೆ - ವಿಗ್ರಹ:- ಪ್ರಕಾರೇಣ ಸಹಿತಂ ಸವಿಕಲ್ಪಕಂ ಪ್ರಕಾರ ಅಂದರೆ ಜ್ಯಾತ್ಯಾದಿ ರೂಪ ವಿಶೇಷವೇ ಆಗಿದೆ. ಇದರಿಂದ ಕೂಡಿದ ಜ್ಞಾನವೇ ಸವಿಕಲ್ಪಕವು ನಾಮ ಜ್ಯಾತ್ಯಾದಿ ವಿಶೇಷ ಸಂಬಂಧದಿಂದ ಕೂಡಿದ ಜ್ಞಾನವೇ ಆಗಿದೆ. ಹೇಗೆಂದರೆ- ಅಯಂ ಶ್ಯಾಮಃ ಶ್ಯಾಮ ವಿಶೇಷ್ಯಕ ಶಾಮತ್ವ ಪ್ರಕಾರಕ ಸಮವಾಯ ಸಂಸರ್ಗಕ ಜ್ಞಾನವೇ ಸವಿಕಲ್ಪಕವು. ಡಿಥ್ಥೋಽಯಂ ಎಂಬಲ್ಲಿ ಡಿಥ್ಥ ಅಂದರೆ ಕಾಷ್ಠಮಯವಾದ ಹಸ್ತಿ ( ಕಟ್ಟಿಗೆಯಿಂದ ನಿರ್ಮಿಸಿದ ಆನೆ) ಇಲ್ಲಿಯೂ ಪೂರ್ವದಂತೆ ತಿಳಿಯಬೇಕು.

ತ.ಸ. :- ಪ್ರತ್ಯಕ್ಷ ಜ್ಞಾನ ಹೇತುರಿಂದ್ರಿಯಾರ್ಥ ಸನ್ನಿಕರ್ಷಃ ಷಡ್ವಿಧಃ। ಸಂಯೋಗಃ , ಸಂಯುಕ್ತ ಸಮವಾಯಃ । ಸಂಯುಕ್ತ ಸಮವೇತ ಸಮವಾಯಃ । ಸಮವಾಯಃ । ಸಮವೇತ ಸಮವಾಯಃ । ವಿಶೇಷ್ಯ ವಿಶೇಷಣ ಭಾವಶ್ಚೇತಿ ॥ ಚಕ್ಷುಷಾಘಟ ಪ್ರತ್ಯಕ್ಷ ಜನನೇ ಸಂಯೋಗಃ। ಸನ್ನಿಕರ್ಷ ಃ ಘಟರೂಪ ಪ್ರತ್ಯಕ್ಷ ಜನನೇ ಸಂಯುಕ್ತ ಸಮವಾಯ ಃ ಸನ್ನಿಕರ್ಷಃ । ಚಕ್ಷುಃ ಸಂಯುಕ್ತ ಘಟೇ ರೂಪಸ್ಯ ಸಮವಾಯಾತ್ । ರೂಪತ್ವಸಾಮಾನ್ಯ ಪ್ರತ್ಯಕ್ಷೆ ಸಂಯುಕ್ತ ಸಮವೇತ ಸಮವಾಯಃ ಸನ್ನಿಕರ್ಷ ಃ । ಚಕ್ಷುಃ ಸಂಯುಕ್ತೇ ಘಟೇ ರೂಪಂ ಸಮವೇತಂ ತತ್ರ ರೂಪತ್ವಸ್ಯ ಸಮವಾಯಾತ್ । ಶ್ರೋತ್ರೇಣ ಶಬ್ದಸಾಕ್ಷಾತ್ಕಾರೆ ಸಮವಾಯ ಸನ್ನಿಕರ್ಷಃ । ಕರ್ಣವಿವರ ವೃತ್ತಿ ಆಕಾಶಸ್ಯ ಶ್ರೋತ್ರತ್ವಾತ್ ಶಬ್ದಸ್ಯ ಆಕಾಶಗುಣತ್ವಾತ್ ಗುಣ ಗುಣಿನೋಶ್ಚ ಸಮವಾಯಾತ್ । ಶಬ್ದತ್ವ ಸಾಕ್ಷಾತ್ಕಾರೇ ಸಮವೇತಸಮವಾಯಃ ಸನ್ನಿಕರ್ಷಃ ಶ್ರೋತ್ರ ಸಮವೇತೆ ಶಬ್ದೇ ಶಬ್ದತ್ವಸ್ಯ ಸಮವಾಯಾತ್। ಅಭಾವ ಪ್ರತ್ಯಕ್ಷೆ ವಿಶೇಷಣ ವಿಶೇಷ್ಯಭಾವಃ ಸನ್ನಿಕರ್ಷ ಘಟಾ ಭಾವವದ್ ಭೂತಲಂ ಇತ್ಯತ್ರ ಚಕ್ಷು ಸಂಯುಕ್ತೆ ಭೂತಲೇ ಘಟಾಭಾವಸ್ಯ ವಿಶೇಷಣತ್ವಾತ್ । ಏವಂ ಸನ್ನಿಕರ್ಷ ಷಟ್ಕಜನ್ಯಂ ಜ್ಞಾನಂ ಪ್ರತ್ಯಕ್ಷಂ ತತ್ಕರಣಂ ಇಂದ್ರಿಯಂ ತಸ್ಮಾತ್ ಇಂದ್ರಿಯಂ ಪ್ರತ್ಯಕ್ಷ ಪ್ರಮಾಣಮಿತಿ ಸಿದ್ಧಂ ।

ಬಾ.ಬೋ :- ದ್ರವ್ಯ ಮಾತ್ರ ಪ್ರತ್ಯಕ್ಷದಲ್ಲಿ ಸರ್ವತ್ರ ಸಂಯೋಗವೇ ಸನ್ನಿಕರ್ಷವು "ದ್ರವ್ಯದ್ವಯೋಃ ಸಂಯೋಗಃ" ಎಂಬ ನಿಯಮನುಸಾರ ೧) ಚಕ್ಷುರಿಂದ್ರಿಯದಿಂದ ಘಟವು ಪ್ರತ್ಯಕ್ಷ ವಾಗಬೇಕಾದರೆ ( ಘಟಸ್ಯ ಪ್ರತ್ಯಕ್ಷಃ ಘಟ ಪ್ರತ್ಯಕ್ಷ ಃ) ಮೊದಲು ಆತ್ಮನಿಗೂ ಮನಸ್ಸಿಗೂ ಸನ್ನಿಕರ್ಷ , ಮನಸ್ಸಿಗೂ ಇಂದ್ರಿಯಕ್ಕು ಸನ್ನಿಕರ್ಷ, ನಂತರ ಇಂದ್ರಿಯಕ್ಕು ಘಟಕ್ಕೂ ಸನ್ನಿಕರ್ಷ , ಈ ರೀತಿ ಸನ್ನಿಕರ್ಷವಾದಾಗ, ಅಯಂ ಘಟಃ ಎಂಬ ಪ್ರತೀತಿಯು ಬರುತ್ತದೆ. ಇದೇ ಸಂಯುಕ್ತ ಸನ್ನಿಕರ್ಷ ಜನ್ಯ ಪ್ರತೀತಿಯು.

೨) ಘಟರೂಪ ಪ್ರತ್ಯಕ್ಷವಾಗಬೇಕಾದರೆ ಸಂಯುಕ್ತ ಸಮವಾಯ ಸನ್ನಿಕರ್ಷವು ಹೇಗೆಂದರೆ :- ಚಕ್ಷು ರಿಂದ್ರಿಯದಿಂದ ಸನ್ನಿ ಕರ್ಷವು ಘಟಕ್ಕೆ ಆಗುವದು. ಈ ಘಟದಲ್ಲಿ ರೂಪವೂ ಸಮವಾಯ ಸಂಬಂಧದಿಂದರುತ್ತದೆ. ಈ ಕಾರಣದಿಂದ ಘಟರೂಪ ಪ್ರತ್ಯಕ್ಷವಾಗ ಬೇಕಾದರೆ ಸಂಯುಕ್ತ ಸಮವಾಯ ಸನ್ನಿಕರ್ಷ ಹೇಳಬೇಕು .

೩) ಘಟದ ರೂಪದಲ್ಲಿಯ ರೂಪತ್ವ ಸಾಕ್ಷಾತ್ಕಾರವಾಗಬೇಕಾದರೆ ಸಂಯುಕ್ತ ಸಮವೇತ ಸಮವಾಯ ಸನ್ನಿಕರ್ಷವು. ಚಕ್ಷುರಿಂದ್ರಿಯ ಸಂಯುಕ್ತ ಘಟ ಈ ಘಟದಲ್ಲಿ ರೂಪವು ಸಮವೇತ ಆಗಿದೆ. (ಸಮವಾಯ ಸಂಬಂಧದಿಂದಿರುತ್ತದೆ. ಈ ರೂಪದಲ್ಲಿ ರೂಪತ್ವವು ಸಮವಾಯ ಸಂಬಂದದಿಂದಿರುತ್ತದೆ. '' ಜಾತಿ ವ್ಯಕ್ತ್ಯೋಃ ಸಮವಾಯಃ'' ಎಂಬ ನಿಯಮಾನುಸಾರ) ಏವಂಚ ರೂಪತ್ವ ಪ್ರತ್ಯಕ್ಷವು ಸಂಯುಕ್ತಸವಮವೇತ ಸಮವಾಯ ಸನ್ನಿಕರ್ಷ ದಿಂದಾಗುತ್ತದೆ.

೪) ಶ್ರೋತ್ರದಿಂದ ಶಬ್ದ ಸಾಕ್ಷಾತ್ಕಾರವಾಗಬೇಕಾದರೆ ಶ್ರೋತ್ರಕ್ಕೂ ಶಬ್ದಕ್ಕೂ ಸಮವಾಯ ಸಂಬಂಧವೆ ಸನ್ನಿಕರ್ಷವು. ಶ್ರೋತ್ರವು ಆಕಾಶವು. ಶಬ್ದವು ಆಕಾಶದ ಗುಣವು (ಗುಣಗುಣಿಗಳಗೆ ಸಮವಾಯ ಎಂಬ ನಿಯಮದಂತೆ) ಶ್ರೋತ್ರ ಶಬ್ದಗಳಿಗೆ ಸಮವಾಯ ಸನ್ನಿಕರ್ಷ ದಿಂದ ಶಬ್ದ ಸಾಕ್ಷತ್ಕಾರವಾಗುತ್ತದೆ.

೫) ಶ್ರೋತ್ರೇಂದ್ರಿಯದಿಂದ ಶಬ್ದಗತ ಶಬ್ದತ್ವ ಸಾಕ್ಷಾತ್ಕಾರವಾಗಬೇಕಾದರೆ ಸಮವೇತ ಸಮವಾಯ ಸನ್ನಿಕರ್ಷವು. ಶ್ರೋತ್ರದಲ್ಲಿ ಸಮವೇತವಾಗಿದೆ (ಸಮವಾಯ ಸಂಬಂಧದಿಂದ ಶಬ್ದವು ಇರುತ್ತದೆ). ಈ ಶಬ್ದದಲ್ಲಿ ಶಬ್ದತ್ವವು ಸಮವಾಯದಿಂದ ಇರುವ ದರಿಂದ ಶಬ್ದತ್ವ ಸಾಕ್ಷಾತ್ಕಾರವು ಸಮವೇತ ಸಮವಾಯ ಸಂಬಂಧದಿಂದ ಆಗುತ್ತದೆ.

೬) ಘಟಾಭಾವವತ್ ಭೂತಲಂ ಎಂಬಲ್ಲಿ ಚಕ್ಷುಃ ಸಂಯುಕ್ತ ಭೂತಲದಲ್ಲಿ ಘಟಾಭಾವವು ವಿಶೇಷಣವಾಗಿದೆ. ಭೂತಲವು ವಿಶೇಷ್ಯವಾಗಿದೆ. ಕಾರಣ ಚಕ್ಷುರಿಂದ್ರಿಯದಿಂದ ಘಟಾಭಾವ ಪ್ರತ್ಯಕ್ಷವಾಗಬೇಕಾದರೆ . ಇಂದ್ರಿಯಕ್ಕೂ ಘಟಾಭಾವಕ್ಕೂ ವಿಶೇಷಣ ವಿಶೇಷ್ಯಭಾವ ಸನ್ನಿಕರ್ಷ ಇರುತ್ತದೆ. ಯಾವಾಗ ಭೂತಲೇ ಘಟಾಭಾವವು ಎಂಬ ಜ್ಞಾನವು ಬರುತ್ತದೆ. ಆಗ ಭೂತಲ ವಿಶೇಷಣವು ಘಟಾಭಾವವು ವಿಶೇಷ್ಯವಾಗುತ್ತದೆ. ಎಂದು ತಿಳಿಯಬೇಕು. ಈ ಪ್ರಕಾರ ಆರು ವಿಧ ಸನ್ನಿಕರ್ಷ ದಿಂದ ಹುಟ್ಟಿದ ಜ್ಞಾನವು ಪ್ರತ್ಯಕ್ಷವೆಂದು ತಿಳಿಯಬೇಕು. ಇವುಗಳಿಗೆ ಕಾರಣವಾದ ಇಂದ್ರಿಯಗಳು ಕರಣ ಪ್ರತ್ಯಕ್ಷಗಳಾಗುತ್ತವೆ. ವಿವರಣೆ : - ಇಲ್ಲಿ ಗ್ರಾಹಕ ಇಂದ್ರಿಯಗಳು ಮೂರು ಇರುತ್ತವೆ. ಚಕ್ಷು, ತ್ವಕ್, ಮನಸ್ಸು ಮೊದಲಿನ ಎರಡು ಇಂದ್ರಿಯಗಳು (ಚಕ್ಷು, ತ್ವಕ್) ಬಾಹ್ಯ ದ್ರವ್ಯ ಗ್ರಾಹಕಗಳು , ಮನಸ್ಸು ಮಾತ್ರ ಅಂತರವಾದ ಆತ್ಮ ಸ್ವರೂಪಗ್ರಹಣ ಮಾಡುತ್ತದೆ ಎಂದು ತಿಳಿಯಬೇಕು .

**ಇತಿ ಪ್ರತ್ಯಕ್ಷ ಪರಿಚ್ಛೇದ ಃ**



# ಅಥ ಅನುಮಾನ ಪರಿಚ್ಛೇದಃ

**ತ. ಸ. :- ಅನುಮಿತಿ ಕರಣಂ ಅನುಮಾನಂ । ಪರಾಮರ್ಶ ಜನ್ಯ ಜ್ಞಾನಂ ಅನುಮಿತಿಃ । ವ್ಯಾಪ್ತಿ ವಿಶಿಷ್ಟ ಪಕ್ಷಧರ್ಮತಾ ಜ್ಞಾನಂ ಪರಾಮರ್ಶಃ । ಉದಾ :- ವಹ್ನಿ ವ್ಯಾಪ್ಯ ಧೂಮವಾನಯಂ ಪರ್ವತಃ ಇತಿ ಜ್ಞಾನಂ ಪರಾಮರ್ಶಃ । ತಜ್ಜನ್ಯಂ ಪರ್ವತೋ ವಹ್ನಿಮಾನಿತಿ ಜ್ಞಾನಂ ಅನುಮಿತಿಃ।**

ಬಾ. ಬೋ :- ಪ್ರತ್ಯಕ್ಷಾನಂತರದಲ್ಲಿ ಅನುಮಾನವು ನಿರುಪಿಸಲಾಗುತ್ತದೆ.
ಅನುಮಿತಿಗೆ ಕರಣವಾದದ್ದೇ ಅನುಮಾನವು (ಅನುಮಿತೇಃ ಕರಣಂ ಅನುಮಿತಿಕರಣಂ) ಪರಾಮರ್ಶದಿಂದ ಹುಟ್ಟದ ಜ್ಞಾನವೇ ಅನುಮಿತಿಯು ವ್ಯಾಪ್ತಿ ವಿಶಿಷ್ಟವಾದ ಪಕ್ಷಧರ್ಮತಾ ಜ್ಞಾನವೇ ಪರಾಮರ್ಶವು (ಪಕ್ಷಧರ್ಮತಾ ಅಂದರೆ ಹೇತುವು ಪಕ್ಷ ವೃತ್ತಿ ಯಾಗಿದೆ. ಎಂಬುವುದು ಇದರ ಜ್ಞಾನವು ಆಗಿದೆ). ವ್ಯಾಪ್ತಿ ಅಂದರೆ ಹೇತು ಸಾಧ್ಯಗಳಿಗೆ ಪರಸ್ಪರ ಸಂಬಂಧ ಸಾಹಚರ್ಯ ಹೇಳುವುದೇ ಆಗಿದೆ. ಇಂತಹ ವ್ಯಾಪ್ತಿಯಿಂದ ಕೂಡಿದ ಪಕ್ಷಧರ್ಮತಾ ಜ್ಞಾನವೇ ಪರಮಾರ್ಶವು. ಉದಾ:- ವಹ್ನಿಯಿಂದ ವ್ಯಾಪ್ಯವಾದ (ವ್ಯಾಪ್ತಿ ವಿಶಿಷ್ಟವಾದ) ಧೂಮವು ಪರ್ವತ ವೃತ್ತಿಯಾಗಿದೆ ಎಂಬ ಜ್ಞಾನವೇ ಪರಾಮರ್ಶ ಆಗಿದೆ ( ವಹ್ನಿ ವ್ಯಾಪ್ಯ ಧೂಮವಾನಯಂ ಪರ್ವತಃ ಇತಿ ಜ್ಞಾನವೇ ಪರಾಮರ್ಶವು ) ಕಾರಣ ಇಂಥ ಪರಾಮರ್ಶದಿಂದ ಹುಟ್ಟಿದ ಜ್ಞಾನವೇ ಅನುಮತಿಯು. ಈ ಅನುಮಿತಿಯಲ್ಲಿ ವ್ಯಾಪ್ತಿ ಜ್ಞಾನವು ಕರಣವು ಪರಾಮರ್ಶವು ವ್ಯಾಪಾರವು ಅನುಮಿತಿಯು ಫಲವೆಂದು ತಿಳಿಯಬೇಕು. ಇದು ಒಂದು ಪಕ್ಷವು.

**ತ. . :- ಯತ್ರ ಯತ್ರ ಧೂಮಃ ತತ್ರ ತತ್ರ ಅಗ್ನಿರಿತಿ ಸಾಹಸಚರ್ಯ ನಿಯಮೋ ವ್ಯಾಪ್ತಿಃ । ವ್ಯಾಪ್ಯಸ್ಯ ಪರ್ವತಾದಿವೃತ್ತಿತ್ವಂ ಪಕ್ಷಧರ್ಮತಾ ।**

ಬಾ. ಬೋ :- ವ್ಯಾಪ್ತಿಯ ಲಕ್ಷಣವನ್ನು ಹೇಳುತ್ತಾರೆ.
ಸಹಚರತಿ ಇತಿ ಸಹಚರಃ ತಸ್ಯಭಾವಃ ಸಾಹಚರ್ಯಂ (ಎರಡು ಪದಾರ್ಥಗಳ ಒಂದಕ್ಕೊಂದು ಬಿಡದೆ ನಿಯಮದಿಂದ ಕೂಡಿ ಇರುವದೇ ವ್ಯಾಪ್ತಿಯು, ಅರ್ಥಾತ್ ನಿಯತ ಸಾಮಾನಾದಿಕರಣ್ಯಂ ವ್ಯಾಪ್ತಿಃ ಏಕಾಧಿಕರಣದಲ್ಲಿ ಹೇತು ಸಾಧ್ಯಗಳಿರುವದೇ ವ್ಯಾಪ್ತಿಯು. ಪರ್ವತೋ ವಹ್ನಿಮಾನ್ ಧೂಮಾತ್ ಎಂಬ ಅನುಮಾನದಲ್ಲಿ ವ್ಯಾಪಕವಾದದ್ದು ವಹ್ನಿಯು. ವ್ಯಾಪ್ಯವಾದದ್ದು ಧೂಮವು ಇವುಗಳು ಒಂದೇ

ಅಧಿಕರಣದಲ್ಲಿರುವದೇ ವ್ಯಾಪ್ತಿ ಎಂದು ಕರೆಯಲ್ಪಡುತ್ತದೆ. ಉದಾ :- ಯಾವ ಮಹಾನಸದಲ್ಲಿ (ಅಡುಗೆ ಮನೆಯಲ್ಲಿ) ಧೂಮವಿದೆಯೋ ಅದೇ (ಅಧಿಕರಣದಲ್ಲಿ) ಅಡುಗೆ ಮನೆಯಲ್ಲಿ ವಹ್ನಿಯು ಇರುತ್ತದೆ. ಹೀಗೆ ಧೂಮವು ಯಾವಾಗಲು ವಹ್ನಿ ಸಹಚರಿತವಾಗಿಯೇ ಇರುತ್ತದೆ. (ವಹ್ನಿ ಬಿಟ್ಟು ಇರುವದಿಲ್ಲ) ಆದಕಾರಣ ಧೂಮ ಹಾಗೂ ವಹ್ನಿಗಳಿಗೆ ವ್ಯಾಪ್ತಿ ಇದೆ ಎಂದು ತಿಳಿಯಬೇಕು. ಪಕ್ಷಧರ್ಮತಾ ಎಂದರೆ ಇಲ್ಲಿ ವಿಗ್ರಹ:- ಪಕ್ಷಸ್ಯ ಧರ್ಮಃ ಆಧೇಯ ತಸ್ಯ ಭಾವಃ ಪಕ್ಷಧರ್ಮತಾ ಅಭಿಪ್ರಾಯವೇನೆಂದರೆ ಪಕ್ಷ (ಪರ್ವತ) ಅದರ ಧರ್ಮ ಆಂದರೆ ಪರ್ವತತ್ವ ಅಲ್ಲ ಆದರೆ ಧರ್ಮ ಅಂದರೆ ಅಧೇಯ ಪರ್ವತದಲ್ಲಿ ಇರುವ ಧೂಮವು ಈ ಧೂಮವು ಆಧೇಯತಾ ಸಂಬಂಧೇನ ಪಕ್ಷವಾದ ಪರ್ವತದಲ್ಲಿ ಇರುವದೇ ಪಕ್ಷಧರ್ಮತಾ ಎಂದು ತಿಳಿಯಬೇಕು.

ತ.ಸ.:- ಅನುಮಾನಂ ದ್ವಿವಿಧಂ । ಸ್ವಾರ್ಥಂ ಪರಾರ್ಥಂ ಚ । ಸ್ವಾರ್ಥಂ ಸ್ವಾನುಮಿತಿ ಹೇತುಃ । ತಥಾಹಿ - ಸ್ವಯ ಮೇವ ಭೂಯೋ ಭೂಯೋ ದರ್ಶನೇನ ಯತ್ರ, ಯತ್ರ ಧೂಮಃ ತತ್ರ ತತ್ರ ಅಗ್ನಿರಿತಿ ಮಹಾನ ಸಾದೌ ವ್ಯಾಪ್ತಿಂ ಗೃಹಿತ್ವಾ ಪರ್ವತ ಸಮೀಪಂಗತ್ವಾ ತದ್ಗತೇಚ ಅಗ್ನೌ ಸಂದಿಹಾನಃ ಪರ್ವತೇ ಧೂಮಂ ಪಶ್ಯನ್ ವ್ಯಾಪ್ತಿಂ ಸ್ಮರತಿ . ಯತ್ರ ಧೂಮಃ ತತ್ರ ಅಗ್ನಿರಿತಿ । ತದನಂತರಂ ವಹ್ನಿವ್ಯಾಪ್ಯ ಧೂಮವಾನಯಂ ಪರ್ವತಃ ಇತಿ ಜ್ಞಾನಂ ಉತ್ಪದ್ಯತೇ । ಅಯಮೇವ ಲಿಂಗ ಪರಾಮರ್ಶಃ ಇತ್ಯುಚ್ಯತೇ । ತಸ್ಮಾತ್ ಪರ್ವತೋ ವಹ್ನಿಮಾನ ಇತಿ ಜ್ಞಾನಮನು ಮಿತಿರುತ್ಪದ್ಯತೇ ತದೇ ತತ್ ಸ್ವಾರ್ಥಾನುಮಾನಂ ।

ಬಾ.ಬೋ. :- ಅನುಮಾನ ವಿಭಾಗ ಮಾಡುತ್ತಾರೆ.

ಅನುಮಾನವು ಎರಡು ಪ್ರಕಾರ ಇರುತ್ತದೆ. ಸ್ವಾರ್ಥಾನುಮಾನ ಹಾಗೂ ಪರಾರ್ಥಾನು ಮಾನವೆಂದು. ಸ್ವಾರ್ಥಾನುಮಾನ ಹೇಗೆಂದರೆ (ಇಲ್ಲಿ ವಿಗ್ರಹವು ಸ್ವಾರ್ಥಂ ಚ ತತ್ ಅನುಮಾನಂಚ ಸ್ವಾರ್ಥಾನುಮಾನಂ) ಸ್ವಾರ್ಥ ಅಂದರೆ- ಸ್ವಸ್ಯ ಅರ್ಥಂ ಪ್ರಯೋಜನಂ ಯಸ್ಮಿನ್ ತತ್ ಸ್ವಾರ್ಥಂ ಇದೇ ಸ್ವಾರ್ಥಾನುಮಾನವು. ಸ್ವಯಂ ತಾನೇ ಪುನಃ ಪುನಃ ಎಲ್ಲಿ ಎಲ್ಲಿ ಧೂಮವಿದೆಯೋ ಅಲ್ಲಿ ಅಲ್ಲಿ ವಹ್ನಿ ಇದೆ ಎಂಬ ವ್ಯಾಪ್ತಿಯನ್ನು ಮಹಾನಸ ದಲ್ಲಿ ಗ್ರಹಿಸಿ (ತಿಳಿದುಕೊಂಡು) ನಂತರ ಪರ್ವತದ ಸಮೀಪಕ್ಕೆ ಹೋಗಿ ಅಲ್ಲಿ ಪರ್ವತದಲ್ಲಿ ವಹ್ನಿ ಇದೆಯೋ ಇಲ್ಲವೋ ಎಂಬ ಸಂಶಯವುಳ್ಳವನಾಗಿ ನಂತರ

ಪರ್ವತದಲ್ಲಿ ಧೂಮವನ್ನು ನೋಡಿ ವ್ಯಾಪ್ತಿಯನ್ನು ಸ್ಮರಿಸುತ್ತಾನೆ (ಎಲ್ಲಿ ಧೂಮವಿದೆಯೋ ಅಲ್ಲಿ ವಹ್ನಿ ಇದೆ ಎಂಬ ವ್ಯಾಪ್ತಿಯನ್ನು ಸ್ಮರಣೆಗೆ ತರುತ್ತಾನೆ) ನಂತರ ವಹ್ನಿವ್ಯಾಪ್ಯಧೂಮವಾನಯಂ ಪರ್ವತಃ ವಹ್ನಿಗೆ ವ್ಯಾಪ್ಯವಾದ ಧೂಮವು, ಈ ಪರ್ವತದಲ್ಲಿ ಇದೇ ಎಂಬ ಜ್ಞಾನವು ಹುಟ್ಟುತ್ತದೆ. ಈ ಜ್ಞಾನಕ್ಕೆನೇ ಲಿಂಗ ಪರಾಮರ್ಶ ಎಂದು ಕರೆಯುತ್ತಾರೆ. ಲಿಂಗ ಎಂಬಲ್ಲಿ ವಿಗ್ರಹವು: - ವ್ಯಾಪ್ತಿ ಬಲೇನ ಲೀನಮರ್ಥಂ ಗಮಯತೀತಿ ಲಿಂಗಂ ಅಂದರೆ ಧೂಮಾದಿ, ತಸ್ಯ ಪರಾಮರ್ಶಃ ಅಂದರೆ ವಹ್ನಿ ವ್ಯಾಪ್ಯ ಧೂಮವಾನಯಂ ಇತ್ಯಾಕಾರಕ ಜ್ಞಾನವಿಶೇಷವು ಇದೇ ಲಿಂಗ ಪರಾಮರ್ಶವೆಂದು ತಿಳಿಯಬೇಕು (ಅಭಿಪ್ರಾಯವೇನೆಂದರೆ- ವ್ಯಾಪ್ತಿ ಬಲೇನ ಲೀನಂ ಅರ್ಥಂ ಗಮಯತೀತಿ ಲಿಂಗಂ, ಲಿಂಗಸ್ಯ ಪರಾಮರ್ಶಃ ಲಿಂಗಪರಾಮರ್ಶಃ ಎಂದು ಸಮಗ್ರ ವಾಕ್ಯದ ವಿಗ್ರಹವು . ಲಿಂಗ ಅಂದರೆ ಧೂಮ ಇದರ ಪರಾಮರ್ಶ ಅಂದರೆ ವಹ್ನಿ ವ್ಯಾಪ್ಯಧೂಮವಾನಯಂ, ಜ್ಞಾನವೇ ಆಗಿದೆ.) ಈ ಪರಾಮರ್ಶ ಜ್ಞಾನದಿಂದ ಪರ್ವತೋ ವಹ್ನಿಮಾನ ಅಂದರೆ ಪರ್ವತವು ವಹ್ನಿ ಉಳ್ಳದ್ದು ಎಂಬ ಅನುಮತಿಯು ಹುಟ್ಟುತ್ತದೆ. ಈ ಅನುಮಿತಿಯು ಹುಟ್ಟಬೇಕಾದರೆ ಜ್ಞಾನದ ಕ್ರಮವು ಹೀಗೆ ಇರುತ್ತದೆ. ಮಹಾನಸದಲ್ಲಿ ಧೂಮಾಗ್ನಿಗಳಿಗೆ ಸಾಹಚಾರ್ಯ ಜ್ಞಾನವು ಪ್ರಥಮವು ಅನಂತರದಲ್ಲಿ ಧೂಮದರ್ಶನದಿಂದ ಹುಟ್ಟಿದ ಸ್ಮೃತಿರೂಪವಾದ ಜ್ಞಾನ ಎರಡನೆಯದು. ಅನಂತರ ಪರಾಮರ್ಶ ಜ್ಞಾನವು ಮೂರನೆಯದು, ಅನಂತರ ನಾಲ್ಕನೆಯ ಕಕ್ಷಾದಲ್ಲಿ ಪರ್ವತವು ವಹ್ನಿ ಉಳ್ಳದ್ದು ಎಂಬ ಅನುಮಿತಿ ಹುಟ್ಟುತ್ತದೆ ( ಈದೊಂದು ಪಕ್ಷ) ಎಂದು ತಿಳಿಯಬೇಕು. ಈ ಪ್ರಕಾರ ಅನುಮಿತಿಯನ್ನು ಹುಟ್ಟಿಸತಕ್ಕ ಅನುಮಾನವೇ ಸ್ವಾರ್ಥಾನುಮಾನವು (ಸ್ವಪ್ರತಿಪತ್ತಿಃ ಹೆತುಃ ಯಸ್ಮಾತ್ ತತ್ ಸ್ವಾರ್ಥಾನುಮಾನಂ ಇತಿ ವಿಗ್ರಹವು) ಯಾವ ಕಾರಣದಿಂದ ಸ್ವ ಪ್ರತಿಪತ್ತಿಗೆ ಕಾರಣವೋ ಅದೇ ಸ್ವಾರ್ಥಾನುಮಾನವು.

**ತ.ಸ.:- ಯತ್ತು ಸ್ವಯಂ ಧೂಮಾದಗ್ನಿಂ ಅನುಮಾಯ ಪರಂ ಪ್ರತಿ ಬೋಧಯಿತುಂ ಪಂಚಾವಯವ ವಾಕ್ಯಂ ಪ್ರಯಂಕ್ತೇ ತತ್ಪರಾರ್ಥಾನುಮಾನಂ । ಯಥಾ ೧) ಪರ್ವತೋ ವಹ್ನಿಮಾನ್ ೨) ಧೂಮವತ್ವಾತ್ ೩) ಯೋ ಯೋ ಧೂಮವಾನ್ ಸಃ ವಹ್ನಿಮಾನ್ ಯಥಾ ಮಹಾನಸಂ ೪) ತಥಾಚಾಯಂ ೫) ತಸ್ಮಾತ್ತಥಾ ಇತ್ಯನೇನ ಪ್ರತಿಪಾದಿತ ಲಿಂಗಾತ್ ಪರೋಽಪಿ ವಹ್ನಿಂ ಪ್ರತಿ ಪದ್ಯತೇ ।**

**ಬಾ. ಬೋ :- ಪರಾರ್ಥಾನುಮಾನವನ್ನು ಹೇಳುತ್ತಾರೆ.**

ಪಂಚಾವಯವ ವಾಕ್ಯಗಳನ್ನು ಉದಹರಿಸುತ್ತಾರೆ. ೧) ಪರ್ವತವು ಅಗ್ನಿಯುಳ್ಳದ್ದು - ಇದು ಪ್ರತಿಜ್ಞಾ ವಾಕ್ಯವು . ೨) ಧೂಮವುಳ್ಳದ್ದರಿಂದ - ಇದು ಹೇತು ವಾಕ್ಯವು ೩) ಯಾವದು ಯಾವದು ಧೂಮವುಳ್ಳದ್ದೋ ಅದು ಅದು ಅಗ್ನಿಯುಳ್ಳದ್ದು ಹೇಗೆಂದರೆ ಅಡುಗೆ ಮನೆಯಂತೆ - ಇದು ಉದಾಹರಣ ವಾಕ್ಯವು. ೪) ತಥಾಚಾಯಂ - ವಹ್ನಿ ವ್ಯಾಪ್ಯಧೂಮವಾನಯಂ ಪರ್ವತಃ (ವಹ್ನಿ ವ್ಯಾಪ್ಯ ಧೂಮವುಳ್ಳದ್ದು ಈ ಪರ್ವತವು)- ಇದು ಉಪನಯ ವಾಕ್ಯವು ೫) ತಸ್ಮಾತ್ ತಥಾ - ತಸ್ಮಾತ್-ವಹ್ನಿವ್ಯಾಪ್ಯ ಧೂಮವಿರುವದರಿಂದ ತಥಾ- ಪರ್ವತವು ವಹ್ನಿಯುಳ್ಳದ್ದು - ಇದು ನಿಗಮನ ವಾಕ್ಯವು. ಈ ಪಂಚಾವಯವ ವಾಕ್ಯದಿಂದ ಪ್ರತಿಪಾದಿತವಾದ (ಇದರ ಅರ್ಥವು ವ್ಯಾಪ್ತಿ ಪಕ್ಷಧರ್ಮತಾ ಬಲದಿಂದ ಪ್ರತಿಪಾದಿತವಾದ ಲಿಂಗ ಜ್ಞಾನದಿಂದ ಎಂದು ಆಗುತ್ತದೆ) ಧೂಮರೂಪ ಲಿಂಗ ಜ್ಞಾನದಿಂದ ಪರನೂ ಸಹ ವಹ್ನಿ ಅನುಮಿತಿಯನ್ನು ಹೊಂದುತ್ತಾನೆ. (ಪರಾರ್ಥಾನುಮಾನ ಎಂದರೆ ನ್ಯಾಯ ಪ್ರಾಯೋಜ್ಯ ಅನುಮಾನವು). ಪಂಚ ಅವಯವಾಃ ಯಸ್ಯ ಸಃ ಪಂಚಾವಯವಃ ನ್ಯಾಯವೆಂದರೆ ಪ್ರತಿಜ್ಞಾದ್ಯವವು, ಉಕ್ತ ಪಂಚಾವಯವಗಳಿಂದ ಹುಟ್ಟಿದ್ದು ಅನುಮಾನವೇ ಆಗಿದೆ. ಇದೇ ಪರಾರ್ಥಾನುಮಾನವು.

**ತ.ಸ.:- ಸ್ವಾರ್ಥಾನುಮಿತಿ ಪರಾರ್ಥಾನುಮಿತ್ಯೋಃ ಲಿಂಗ ಪರಾಮರ್ಶ ಏವ ಕಾರಣಂ । ತಸ್ಮಾತ್ ಲಿಂಗ ಪರಾಮರ್ಶೋಽನುಮಾನಂ ।**

ಬಾ. ಬೋ :- ಅನುಮತಿ ಸಾಮಾನ್ಯ ಲಕ್ಷಣವನ್ನು ಹೇಳುತ್ತಾರೆ.

ಪೂರ್ವದಲ್ಲಿ ಹೇಳಿದ ಸ್ವಾರ್ಥಾನುಮಿತಿ ಪರಾರ್ಥಾನುಮಿತಿಗಳಿಗೆ ಲಿಂಗ ಪರಾಮರ್ಶವೇ ಕಾರಣವು ಇದರ ಅಭಿಪ್ರಾಯವೇನೆಂದರೆ -ವಹ್ನಿಃ ವ್ಯಾಪ್ಯಧೂಮವಾನಯಂ ಪರ್ವತಃ ಎಂಬ ಜ್ಞಾನವೇ ಲಿಂಗ ಪರಾಮರ್ಶವು ಇದೇ ಕರಣವು . ಇವರ ಮತದಲ್ಲಿ - ಫಲಾಯೋಗ ವ್ಯವಚ್ಛಿನ್ನಂ ಕಾರಣಂ ಕರಣಂ ತಥಾಚ ಯತ್ಸತ್ವೇ ಅವ್ಯವಹಿತೋತ್ತರ ಕ್ಷಣೇ ಕಾರ್ಯಂ ಜಾಯತೇ ತದೇವ ಕರಣಮಿತಿ. ಇದರ ಅಭಿಪ್ರಾಯವೇನೆಂದರೆ - ಯಾವದು ಇರುವದರಿಂದ (ಪರಾಮರ್ಶ ಜ್ಞಾನವು ಇರುವದರಿಂದ) ವ್ಯವಹಿತವಾಗದೇ ಶೀಘ್ರವಾಗಿಯೇ ಕಾರ್ಯವು ಹುಟ್ಟುತ್ತದೆಯೋ ಅದೇ ಕರಣವೆಂದು ತಿಳಿಯಬೇಕು. ಇವರ ಪಕ್ಷದಲ್ಲಿ ಪರಾಮರ್ಶವೇ ಅನುಮಾನವು. ಇನ್ನೊಂದು ಪಕ್ಷದಲ್ಲಿ - ವ್ಯಾಪ್ತಿಜ್ಞಾನ ಪ್ರಾಧಾನ್ಯ ವಿವಕ್ಷೆಯಿಂದ ಲಿಂಗ ಪರಾಮರ್ಶ ಕರಣ ಅಂದರೆ ಲಿಂಗಪರಾಮರ್ಶ ಕಾರಣೇ

ಭೂತ ವ್ಯಾಪ್ತಿಜ್ಞಾನವೇ ಅನುಮಾನವು ಲಿಂಗ ಪರಾಮರ್ಶವು ವ್ಯಾಪಾರವು. ಅನುಮಿತಿಯು ಫಲವು ಎಂಬ ಅಭಿಪ್ರಾಯವಿದೆ.

**ತ.ಸ.:- ಲಿಂಗಂ ತ್ರಿವಿಧಂ । ಅನ್ವಯವ್ಯತಿರೇಕಿ ಕೇವಲಾನ್ವಯಿ , ಕೇವಲವ್ಯತಿರೇಕಿಚೇತಿ । ಅನ್ವಯೇನ ವ್ಯತಿರೇಕೇಣ ಚ ವ್ಯಾಪ್ತಿಮತ್ ಅನ್ವಯ ವ್ಯತಿ ರೇಕಿ ಯಥಾ ವಹ್ನೌಸಾಧ್ಯೆ ಧೂಮವತ್ವಂ , ಯತ್ರ ಧೂಮಃ ತತ್ರ ಅಗ್ನಿರ್ಯಥಾ ಮಹಾನಸಂ ಇತ್ಯನ್ವಯವ್ಯಾಪ್ತಿಃ । ಯತ್ರ ವಹ್ನಿರ್ನಾಸ್ತಿ ತತ್ರ ಧೂಮೋಽಪಿನಾಸ್ತಿ ಯಥಾ ಹ್ರದಃ ಇತಿ ವ್ಯತಿರೇಕ ವ್ಯಾಪ್ತಿಃ ।**

ಬಾ.ಬೋ: ಅನ್ವಯ ವ್ಯತಿರೇಕ ಲಕ್ಷಣ ವನ್ನು ಹೇಳುತ್ತಾರೆ.
ಸಾಧ್ಯಸಾಧನಗಳಿಗೆ ಸಾಹಚರ್ಯ ನಿಯಮವೇ ಅನ್ವಯವು . ಸಾಧ್ಯಾಭಾವ ಸಾಧನಾಭಾವಗಳಿಗೆ ಸಾಹಚರ್ಯವು ವ್ಯತಿರೇಕವು ಯಾವ ಹೇತುವಿಗೆ ಅನ್ವಯ ವ್ಯಾಪ್ತಿ ಹಾಗೂ ವ್ಯತಿರೇಕ ವ್ಯಾಪ್ತಿ ಇದೇಯೋ ಆಹೇತುವು(ಲಿಂಗವು) ಅನ್ವಯವ್ಯತಿರೇಕಿ ಹೇತುವು ಆಗುತ್ತದೆ ಉದಾ :-ಪರ್ವತೋ ವಹ್ನಿಮಾನ ಧೂಮಾತ್ ಎಂಬಲ್ಲಿ ಧೂಮರೂಪ ಹೇತು ಅನ್ವಯ ವ್ಯತಿರೇಕಿ ಆಗುತ್ತದೆ. ಈ ಧೂಮ ಹೇತುವಿಗೆ ಎಲ್ಲಿ ಎಲ್ಲಿ ಧೂಮವೋ ಅಲ್ಲಿ ಅಲ್ಲಿ ವಹ್ನಿಯು ಮಹಾನಸದಂತೆ ಎಂಬ ಅನ್ವಯವಿದೆ ಅದರಂತೆ ಎಲ್ಲಿ ಎಲ್ಲಿ ವಹ್ನಿಅಭಾವವೂ ಅಲ್ಲಿ ಅಲ್ಲಿ ಧೂಮಾಭಾವವು ಇದೆ ಹ್ರದದಂತೆ ಎಂಬ ವ್ಯತಿರೇಕ ವ್ಯಾಪ್ತಿ ಇದೆ . ಈ ಕಾರಣದಿಂದ ಧೂಮ ಹೇತುವು ಅನ್ವಯ ವ್ಯತಿರೇಕಿ ಹೇತುವು ಆಗುತ್ತದೆ.

**ತ.ಸ.:- ಅನ್ವಯ ಮಾತ್ರ ವ್ಯಾಪ್ತಿಕಂ ಕೇವಲಾನ್ವಯಿ । ಯಥಾ ಘಟೋ ಅಭಿಧೇಯಃ ಪ್ರಮೇಯತ್ವಾತ್ ಪಟವತ್ । ಅತ್ರ ಪ್ರಮೇಯ-ತ್ವಾಭಿಧೇಯತ್ವಯೋಃ ವ್ಯತಿರೇಕ ವ್ಯಾಪ್ತಿರ್ನಾಸ್ತಿ ಸರ್ವಸ್ಯ ಪ್ರಮೇಯ ತ್ವಾದಭಿಧೇಯತ್ವಾಚ್ಚ ।**

ಬಾ.ಬೋ:- ಭಾವ ಪದಾರ್ಥಗಳಿಗೆವ್ಯಾಪ್ತಿಯು ಅನ್ವಯ ವ್ಯಾಪ್ತಿಯು ಲಕ್ಷಣವೇನೆಂದರೆ ವ್ಯತಿರೇಕ ವ್ಯಾಪ್ತಿ ಶುನ್ಯವಾಗಿ ಅನ್ವಯ ಮಾತ್ರ ವ್ಯಾಪ್ತಿಯುಳ್ಳದ್ದೇ ಕೇವಲಾನ್ವಯಿ

ಲಕ್ಷಣವಾಗಿದೆ (ಯಾವಲಿಂಗವು) ವ್ಯತಿರೇಕವ್ಯಾಪ್ತಿರಹಿತವಾಗಿ ಕೇವಲ ಅನ್ವಯವ್ಯಾಪ್ತಿಯುಳ್ಳದ್ದಾಗಿದೆಯೋ ಆ ಹೇತು (ಲಿಂಗ) ವೇ ಕೇವಲಾನ್ವಯಿ ಹೇತುವು. ಉದಾ :- ಘಟವು ಅಭಿಧೇಯವು (ಪದಾರ್ಥವು) ಪ್ರಮೇಯತ್ವ ಇರುವದರಿಂದ (ಪ್ರಮಾಕ್ಕೆ ವಿಷಯವಾದ್ದರಿಂದ) ಪಟದಂತೆ ಎಂಬ ದೃಷ್ಟಾಂತವು ಈ ಅನುಮಾನಕ್ಕೆ ಎಲ್ಲಿ ಪ್ರಮೇಯತ್ವವ್ರೋ ಅಲ್ಲಿ ಅಭಿಧೇಯತ್ವವು ಎಂಬ ಅನ್ವಯ ವ್ಯಾಪ್ತಿ ಇದೆ. ಹೊರತು ಎಲ್ಲಿ ಅಭಿಧೇಯತ್ವಾಭಾವವೋ ಅಲ್ಲಿ ಪ್ರಮೇಯತ್ವಾಭಾವ ಎಂಬ ವ್ಯತಿರೇಕ ವ್ಯಾಪ್ತಿ ಇಲ್ಲ. (ಅಭಾವಾಭಾವಗಳಿಗೆ ವ್ಯಾಪ್ತಿ ಇಲ್ಲ) ಯಾಕೆಂದರೆ ಸರ್ವತ್ರದಲ್ಲಿ ಪ್ರಮೇಯತ್ವ ಅಭಿಧೇಯತ್ವವೇ ಇರುತ್ತದೆ. ಹೊರತು ಅಭಿಧೇಯತ್ವಾಭಾವ ಪ್ರಮೇಯತ್ವಾಭಾವವು ಇರುವುದಿಲ್ಲ. ಆದಕಾರಣ ಪ್ರಮೇಯತ್ವ ಹೇತುವು ಕೇವಲಾನ್ವಯಿಯಾಗುತ್ತದೆ.

**ತ.ಸ.:- ವ್ಯತಿರೇಕ ಮಾತ್ರ ವ್ಯಾಪ್ತಿಕಂ ಕೇವಲವ್ಯತಿರೇಕಿ । ಯಥಾ - ಪೃಥಿವೀ ಇತರೇಭ್ಯೋ ಭಿದ್ಯತೇ ಗಂಧವತ್ತ್ವಾತ್ ಯದಿತರೇಭ್ಯೋ ನ ಭಿದ್ಯತೇ ನ ತದ್ಗಂಧವತ್ ಯಥಾ ಜಲಂ ನ ಚೇಯಂ ತಥಾ । ತಸ್ಮಾನ್ನ ತಥೇತಿ । ಅತ್ರ ಯದ್ಗಂಧವತ್ತದಿತರಭಿನ್ನಂ ಇತ್ಯನ್ವಯದೃಷ್ಟಾಂತೋ ನಾಸ್ತಿ, ಪೃಥಿವಿಮಾತ್ರಸ್ಯ ಪಕ್ಷತ್ವಾತ್ ।**

ಬಾ.ಬೋ.:- ವ್ಯತಿರೇಕ ವ್ಯಾಪ್ತಿಕಂ ಇಲ್ಲಿ ವಿಗ್ರಹ :- ವ್ಯತಿರೇಕಣ - ಅಭಾವೇನ ವ್ಯಾಪ್ತಿಃ ಯಸ್ಮಿನ್ ತತ್ ವ್ಯತಿರೇಕವ್ಯಾಪ್ತಿಕಂ. ಸಾಧ್ಯಭಾವ ಸಾಧನಾಭಾವಗಳಿಂದ ವ್ಯಾಪ್ತಿ ಉಳ್ಳದ್ದೇ ವ್ಯತಿರೇಕ ಹೇತು (ಲಿಂಗ)ವು. (ಇದರಂತೆ ಅನ್ವಯ ವ್ಯಾಪ್ತಿಕಂ ಎಂಬಲ್ಲಿ ವಿಗ್ರಹವು).
ವ್ಯತಿರೇಕಿ ಲಕ್ಷಣವು:- ಅನ್ವಯ ವ್ಯಾಪ್ತಿಶೂನ್ಯತ್ವೇಸತಿ ವ್ಯತಿರೇಕ - ವ್ಯಾಪ್ತಿಮತ್ವಂ ಕೇವಲ ವ್ಯತಿರೇಕಿ ಲಕ್ಷಣಂ. ಅನ್ವಯ ವ್ಯಾಪ್ತಿಯಿಂದ ರಹಿತವಾಗಿ ವ್ಯತಿರೇಕ ವ್ಯಾಪ್ತಿ ಉಳ್ಳದ್ದೇ ಕೇವಲ ವ್ಯತಿರೇಕಿ ಹೇತುವಿನ ಲಕ್ಷಣವು. ಉದಾ :- ಪೃಥಿವಿಯು, ಪೃಥಿವಿಯಿಂದ ಭಿನ್ನಗಳಾದ ಜಲಾದ್ಯಷ್ಟ ದ್ರವ್ಯ ರಹಿತವು ಗಂಧ ಉಳ್ಳದ್ದಾದುದರಿಂದ ಎಂಬಲ್ಲಿ ದೃಷ್ಟಾಂತವು ಜಲವು ಈ ಜಲದಲ್ಲಿ ಪೃಥಿವೀತರವಾದ ಜಲಾದಿಗಳಿಂದ ಭೇದವೂ ಇಲ್ಲ ಹಾಗೂ ಗಂಧವೂ ಇಲ್ಲ ಎಂದು ವ್ಯತಿರೇಕವ್ಯಾಪ್ತಿಯು ಕಂಡಿದೆ. ಆದರೆ ಯಾವದು ಗಂಧ ಉಳ್ಳದ್ದೋ ಅದು ಇತರದಿಂದ ಭಿನ್ನವು ಎಂಬ ಅನ್ವಯ ವ್ಯಾಪ್ತಿಯು ಇಲ್ಲ. ಪೃಥಿವಿಮಾತ್ರವು ಪಕ್ಷವಾಗಿರುವದರಿಂದ (ಅನ್ವಯ ವ್ಯಾಪ್ತಿ ಹೇಳಲು ದೃಷ್ಟಾಂತವು ಇಲ್ಲ) ಆದ ಕಾರಣ ಇದು ಕೇವಲ ವ್ಯತಿರೇಕಿಯು.
ಈಗ ಪಕ್ಷಾದಿ ಲಕ್ಷಣವನ್ನು ಹೇಳುತ್ತಾರೆ.

ತ.ಸ.:- ಸಂಧಿಗ್ಧ ಸಾಧ್ಯವಾನ್ ಪಕ್ಷಃ । ಯಥಾ ಧೂಮವತ್ವೇ ಹೇತೌ ಪರ್ವತಃ । ನಿಶ್ಚಿತ ಸಾಧ್ಯವಾನ್ ಸಪಕ್ಷಃ । ಯಥಾ ತತ್ರೈವ ಮಹಾನಸಂ। ನಿಶ್ಚಿತ ಸಾಧ್ಯಾಭಾವವಾನ್ ವಿಪಕ್ಷಃ । ಯಥಾ ತತ್ರೈವ ಮಹಾಹೃದ ಃ ।

ಬಾ.ಬೋ:- ಸಾಧ್ಯ ಪ್ರಕಾರಕ ಸಂಶಯ ವಿಶೇಷ್ಯವಾಗಿರುವದೇ ಪಕ್ಷವು. ೧) ಪರ್ವತವು ವಹ್ನಿ ಉಳ್ಳದ್ದೋ ಅಲ್ಲವೊ ಎಂಬ ಸಂಶಯ. ಈ ಸಂಶಯದಲ್ಲಿ ಸಾಧ್ಯವು ಪ್ರಕಾರ ವಾಗಿದೆ. ಪರ್ವತವು ವಿಶೇಷ್ಯವಾಗಿದೆ ಈ ವಿಶೇಷ್ಯತ್ವ ಪರ್ವತದಲ್ಲಿ ಬರುವದಿರಿಂದ ಪರ್ವತವು ಪಕ್ಷವು. ೨) ನಿಶ್ಚಿತ ಸಾಧ್ಯ ಉಳ್ಳದ್ದು ಸಪಕ್ಷವು ಧೂಮಾ ನುಮಾನದಲ್ಲಿ ಸಪಕ್ಷವು ಮಹಾನಸವು ಅಲ್ಲಿ ಸಾಧ್ಯಪ್ರಕಾರಕ ನಿಶ್ಚಯ ವಿಶೇಷ್ಯತ್ವ ಇದೆ ಮಹಾನಸದಲ್ಲಿ (ಸಾಧ್ಯವಾದ ವಹ್ನಿ ನಿಶ್ಚಯವಿದೆ ) ಈ ಸಾಧ್ಯಪ್ರಕಾರಕ ನಿಶ್ಚಯಕ್ಕೆ ಮಹಾನಸವು ವಿಶೇಷ್ಯವಾಗಿದೆ ಕಾರಣ ಸಪಕ್ಷವು. ೩) ನಿಶ್ಚಿತ ಸಾಧ್ಯಾಭಾವ ಉಳ್ಳದ್ದು ಹೃದವು ವಿಪಕ್ಷ ವಾಗಿದೆ. ಹೃದದಲ್ಲಿ ವಹ್ನಿ ಅಭಾವ ನಿಶ್ಚಯವಿದೆ ಹಾಗೂ ಉಕ್ತನಿಶ್ಚಯಕ್ಕೆ ಹೃದವು ವಿಶೇಷ್ಯವು ಆಗಿದೆ (ಅಭಿಪ್ರಾಯ:- ಸಾಧ್ಯಾಭಾವ ನಿಶ್ಚಯ ಅಂದರೆ ಹೃದವು ವಹ್ನಿ ಅಭಾವ ಉಳ್ಳದ್ದು ಎಂಬ ನಿಶ್ಚಯ ಇದಕ್ಕೆ ವಿಶೇಷ್ಯವಾಗಿದೆ ಮಹಾಹೃದವು) ಕಾರಣ ಅದು ವಿಪಕ್ಷವು.

ತ.ಸ.:- ಸವ್ಯಭಿಚಾರ ವಿರುದ್ಧ ಸತ್ಪ್ರತಿಪಕ್ಷಾಸಿದ್ಧ ಬಾಧಿತಾ ಃ ಪಂಚ ಹೇತ್ವಾಭಾಸಾಃ । ಸವ್ಯಭಿಚಾರೋಽನೈಕಾಂತಿಕಃ । ಸಃ ತ್ರಿವಿಧಃ ಸಾಧಾರಣಾಸಾಧಾರಣಾನುಪಸಂಹಾರಿ ಭೇದಾತ್ । ತತ್ರ ಸಾಧ್ಯಾಭಾವ ವದ್ವೃತ್ತಿಃ ಸಾಧಾರಣೋಽನೈಕಾಂತಿಕಃ । ಯಥಾ ಪರ್ವತೋ ವಹ್ನಿಮಾನ್ ಪ್ರಮೇಯತ್ವಾದಿತಿ ಪ್ರಮೇತ್ವಸ್ಯ ವಹ್ನಿ ಅಭಾವವತಿ ಹೃದೆ ವಿದ್ಯಮಾನತ್ವಾತ್। ಸರ್ವ ಸಪಕ್ಷ ವಿಪಕ್ಷ ವ್ಯಾವೃತ್ತಃ ಪಕ್ಷ ಮಾತ್ರ ವೃತ್ತಿರಸಾಧಾರಣಃ । ಯಥಾ ಶಬ್ದೋ ನಿತ್ಯಃ ಶಬ್ದತ್ವಾದಿತಿ ಶಬ್ದತ್ವಂ ಸರ್ವೇಭ್ಯೋ ನಿತ್ಯೇಭ್ಯೋಽನಿತ್ಯೇಭ್ಯಶ್ಚ ವ್ಯಾವೃತ್ತಂ ಶಬ್ದಮಾತ್ರ ವೃತ್ತಿ ಅನ್ವಯ ವ್ಯತಿರೇಕ ದೃಷ್ಟಾಂತರಹಿತೋಽನುಪಸಂಹಾರಿ । ಯಥಾ ಸರ್ವಂ ಅನಿತ್ಯಂ ಪ್ರಮೇಯತ್ವಾದಿತಿ । ಅತ್ರ ಸರ್ವಸ್ಯಾಪಿ ಪಕ್ಷತ್ವಾತ್ ದೃಷ್ಟಾಂತೋನಾಸ್ತಿ।

ಬಾ.ಬೋ:- ಅನೈಕಾಂತಿಕಃ ( ಏಕಾಂತೇನ ಅವ್ಯಭೀಚಾರೇಣ ಚರತೀತಿ ಏಕಾಂತಿಕಃ

ಏಕಾಂತಿಕೊ ನ ಭವತೀತಿ ಅನೈಕಾಂತಿಕಃ ಇದರ ಅರ್ಥ :- ಹೇತುವು ಒಂದೇ ಕಡೆ ಇರದೇ ಸಾಧ್ಯದ ಜೊತೆಯಲ್ಲಿ ಇದ್ದು ಸಾಧ್ಯಾಭಾವದ ಜತೆಯಲ್ಲಿಯೂ ಇರುವದೇ ಅನೈಕಾಂತಿಕವು) ಈ ಅನೈಕಾಂತಿಕವು ಮೂರು ವಿಧ - ಸಾಧಾರಣ, ಅಸಾಧಾರಣ, ಅನುಪಸಂಹಾರೀ ಭೇದದಿಂದ (ಮೂರು ಪ್ರಕಾರ ಇರುತ್ತದೆ.)

೧) ಸಾಧಾರಣ ಅನೈಕಾಂತಿಕ ಅಂದರೆ - ಸಾಧ್ಯಾಭಾವ ಎಲ್ಲಿದೆಯೋ ಅಲ್ಲಿ ಹೇತುವು ಇದ್ದಲ್ಲಿ, ಆ ಹೇತುವು ಅನೈಕಾಂತಿಕ ವಾಗುತ್ತದೆ. ಉದಾ:- ಪರ್ವತ ವಹ್ನಿ ಉಳ್ಳದ್ದು ಪ್ರಮೇಯತ್ವ ಇರುವದರಿಂದ ಈ ಅನುಮಾನದಲ್ಲಿಯ ಹೇತುವಾದ ಪ್ರಮೇಯತ್ವವು ಸಾಧ್ಯ ವಹ್ನಿಯು, ಸಾಧ್ಯಾಭಾವ ಅಂದರೆ ವಹ್ನಿ ಅಭಾವ, ಈ ವಹ್ನಿ ಅಭಾವ ಉಳ್ಳದ್ದು ಜಲಹ್ರದ ಈ ಜಲಹ್ರದದಲ್ಲಿ ಇರುತ್ತದೆ. ಪ್ರಮೇಯತ್ವವು ಕಾರಣ ಪ್ರಮೇಯತ್ವ ಹೇತುವು ಸಾಧಾರಣ ಅನೈಕಾಂತಿಕ ವಾಗುತ್ತದೆ. (ಹೇತುವು ಅನೈಕಾಂತಿಕ ದೋಷ ಉಳ್ಳದ್ದಾದರೆ ವ್ಯಾಪ್ತಿಜ್ಞಾನ ಆಗದಿರುವದರಿಂದ) ಅನುಮಿತಿ ಹುಟ್ಟಲಾರದು. ಅನುಮಿತಿಗೆ ಪ್ರತಿಬಂಧಕವಾಗುತ್ತದೆ.

೨) ಅಸಾಧಾರಣ ಅನೈಕಾಂತಿಕ - ಯಾವ ಅನುಮಾನದ ಹೇತುವು ಸಪಕ್ಷದಲ್ಲಿ ಇಲ್ಲದೇ ವಿಪಕ್ಷದಲ್ಲಿಯೂ ಇಲ್ಲದೇ ಪಕ್ಷದಲ್ಲಿ ಮಾತ್ರ ಇರುತ್ತದೆಯೋ ಆ ಹೇತುವು ಅಸಾಧಾರಣ ಅನೈಕಾಂತಿಕ ವಾಗುತ್ತದೆ. ಉದಾ :- ಶಬ್ದೋ ನಿತ್ಯಃ ಶಬ್ದತ್ವಾತ್ ಈ ಅನುಮಾನದಲ್ಲಿ ಶಬ್ದತ್ತ್ವವು ಹೇತುವು ಸಪಕ್ಷವಾದ ಆಕಾಶ ಕಾಲಾದಿಗಳಲ್ಲಿ ವಿಪಕ್ಷವಾದ ಘಟಾದಿಗಳಲ್ಲಿ ಇಲ್ಲದೇ ಪಕ್ಷವಾದ ಶಬ್ದದಲ್ಲಿ ಮಾತ್ರ ಇರುವದರಿಂದ ಶಬ್ದತ್ವವು ಅಸಾಧಾರಣ ಅನೈಕಾಂತಿಕ ವಾಗುತ್ತದೆ.

೩) ಅನುಪಸಂಹಾರೀ ಹೇತುವು - ಅನ್ವಯ ವ್ಯತಿರೇಕ ದೃಷ್ಟಾಂತ ರಹಿತವಾದದ್ದೇ ಅನುಪಸಂಹಾರಿಯು ಉದಾ :- ಸರ್ವಂ ಅನಿತ್ಯಂ ಪ್ರಮೇಯತ್ವಾತ್, ಈ ಅನುಮಾನದಲ್ಲಿ ಸರ್ವವು ಪಕ್ಷವಾದ್ದರಿಂದ ಅನ್ವಯ ದೃಷ್ಟಾಂತವಾಗಲಿ ವ್ಯತಿರೇಕ ದೃಷ್ಟಾಂತವಾಗಲಿ ಇಲ್ಲದ ಕಾರಣ ಪ್ರಮೇಯತ್ವ ಹೇತುವು ಅನುಪಸಂಹಾರೀ ಆಗುತ್ತದೆ.

**ತ.ಸ.:- ಸಾಧ್ಯಾಭಾವ ವ್ಯಾಪ್ತೋ ಹೇತುರ್ವಿರುದ್ಧಃ। ಯಥಾ ಶಬ್ದೋ ನಿತ್ಯಃ ಕೃತಕತ್ವಾದಿತಿ ಕೃತಕತ್ವಂ ಹಿ ನಿತ್ಯತ್ವಾಭಾವೇನ ಅನಿತ್ಯತ್ವೇನ ವ್ಯಾಪ್ತಂ।**

ಬಾ. ಬೋ :- ಯಾವ ಹೇತುವು ಸಾಧ್ಯ ಸಾಧನ ಮಾಡಲು ಪ್ರಯುಕ್ತವಾಗಿದೆಯೋ

ಅದೇ ಹೇತುವೇ ಸಾಧ್ಯಾಭಾವ ಸಾಧನೆ ಮಾಡಿದಲ್ಲಿ ಆವಾಗ ಉಕ್ತ ಹೇತುವು ವಿರುದ್ಧವಾಗುತ್ತದೆ. ಉದಾ :- ಶಬ್ದೋ ನಿತ್ಯಃ ಕೃತಕತ್ವಾತ್ , ಈ ಅನುಮಾನದಲ್ಲಿ ಶಬ್ದವು ಪಕ್ಷವಾಗಿದೆ. ನಿತ್ಯತ್ವವು ಸಾಧ್ಯ, ಕೃತಕತ್ವವು ಹೇತು. ಈ ಅನುಮಾನದಲ್ಲಿ ಕೃತಕತ್ವ ಹೇತು ನಿತ್ಯತ್ವ ಸಾಧನೆ ಮಾಡಲು ಹೊರಟು, ಸಾಧ್ಯಾಭಾವವನ್ನೆ (ಅನಿತ್ಯತ್ವವನ್ನು ಸಾಧನೆ ಮಾಡುವದರಿಂದ ಸಾಧ್ಯಾಭಾವ (ಅನಿತ್ಯತ್ವ) ದಿಂದ ವ್ಯಾಪ್ತವಾದ ಕೃತಕತ್ವವು ವಿರುದ್ಧವಾಗಿದೆ.

**ತ.ಸ.:- ಸಾಧ್ಯಾಭಾವ ಸಾಧಕಂ ಹೇತ್ವಂತರಂ ಯಸ್ಯ ಸ ಸತ್ಪ್ರತಿಪಕ್ಷಃ। ಯಥಾ ಶಬ್ದೋ ನಿತ್ಯಃ ಶ್ರಾವಣತ್ವಾತ್ ಶಬ್ದತ್ವವದಿತಿ ಶಬ್ದೋಽನಿತ್ಯಃ ಕಾರ್ಯತ್ವಾತ್ ಘಟವದಿತಿ ।**

ಬಾ.ಬೋ:- ಯಾವ ಹೇತುವಿಗೆ ಸಾಧ್ಯಾಭಾವ ಸಾಧಕ ಹೇತ್ವಂತರ (ಅನ್ಯ ಹೇತುವು) ಇದೆಯೋ (ಮೊದಲಿನ ಸಾಧ್ಯದ ಅಭಾವ ಸಾಧಕ ಮತ್ತೊಂದು ಹೇತು ಇರುತ್ತದೆಯೋ) ಅದೇ ಸತ್ಪ್ರತಿಪಕ್ಷವು ಉದಾ :- ಶಬ್ದಃ ನಿತ್ಯಃ ಶ್ರಾವಣತ್ವಾತ್ (ಶ್ರವಣೇಂದ್ರಿಯ ಜನ್ಯವಾದ ಜ್ಞಾನಕ್ಕೆ ವಿಷಯವಾಗಿರುವದು) ಈ ಅನುಮಾನವು ಶ್ರಾವಣತ್ವ ಹೇತುವಿನಿಂದ ನಿತ್ಯತ್ವ ಸಾಧನೆ ಮಾಡಲು ಹೊರಟಿದೆ. ಆದರೆ ಈ ಅನುಮಾನಕ್ಕೆ ಪ್ರತಿ ಅನುಮಾನವು - ಶಬ್ದೋ ಅನಿತ್ಯಃ ಕಾರ್ಯತ್ವಾತ್ ( ಶಬ್ದವು ಕಾರ್ಯವಾದ್ದರಿಂದ ಅನಿತ್ಯವೆಂದು ) ಸಾಧಿತವಾಯಿತು ಹೀಗೆ ಪೂರ್ವಾನುಮಾನ ಸಾಧ್ಯ ನಿತ್ಯತ್ವವು ಅದರ ಅಭಾವವನ್ನು ಅನಿತ್ಯತ್ವವನ್ನು ಸಾಧನೆ ಮಾಡುತ್ತದೆ. ಆದ್ದರಿಂದ ಕಾರ್ಯತ್ವ ಹೇತುವು ಮೊದಲಿನ ಅನುಮಾನಕ್ಕೆ ವಿರೋಧ ಆಗಿದೆ, ಕಾರಣ ಶ್ರಾವಣತ್ವ ಹೇತು ಸತ್ಪ್ರತಿಪಕ್ಷವಾಯಿತು. (ಪ್ರತಿ ಪಕ್ಷ ಅನುಮಾನವನ್ನು ಹೊಂದಿರುವದರಿಂದ ಶ್ರಾವಣತ್ವ ಹೇತುವು ಸಾಕ್ಷಾತ್ ಅನುಮಿತಿಗೆ ಪ್ರತಿಭಂಧಕವಾಯಿತು ಕಾರಣ ಶಬ್ದಃ ನಿತ್ಯಃ ಎಂಬ ಅನುಮಿತಿಯನ್ನು ಹುಟ್ಟಿಸಲಾರದು)

**ತ.ಸ.:- ಅಸಿದ್ಧಸ್ತ್ರಿವಿಧಃ ಆಶ್ರಯಾಸಿದ್ಧಃ ಸ್ವರೂಪಾಸಿದ್ಧೋ ವ್ಯಾಪ್ಯತ್ವಾಸಿದ್ಧಶ್ಚೇತಿ । ೧) ಆಶ್ರಯಾಸಿದ್ಧೋ ಯಥಾ ಗಗನಾರವಿಂದಂ ಸುರಭಿ ಅರವಿಂದವತ್ವಾತ್ ಸರೋಜಾರವಿಂದವತ್। ತತ್ರ ಗಗನಾರ ವಿಂದ ಮಾಶ್ರಯಃ ಸಃ ಚ ನಾಸ್ತ್ಯೇವ । ೨) ಸ್ವರೂಪಾ ಸಿದ್ಧೋ ಯಥಾ ಶಬ್ದೋ ಗುಣಃ ಚಾಕ್ಷುಷತ್ವಾತ್ , ಅತ್ರ ಚಾಕ್ಷುಷತ್ವಂ**

**ಶಬ್ದೇ ನಾಸ್ತಿ ಶಬ್ದಸ್ಯ ಶ್ರಾವಣತ್ವಾತ್ ।**

ಬಾ.ಬೊ:- ಅಸಿದ್ಧವು ೧) ಆಶ್ರಯಾಸಿದ್ಧ, ೨) ಸ್ವರೂಪಾಸಿದ್ಧ ೩) ವ್ಯಾಪ್ಯತ್ವಾಸಿದ್ಧ ಎಂದು ಮೂರು ಪ್ರಕಾರ ಇರುತ್ತದೆ.

೧) ಈ ಅನುಮಾನದಲ್ಲಿ ಗಗನಾರವಿಂದವು ಪಕ್ಷವು ಸುರಭಿತ್ವವು ಸಾಧ್ಯವು ಅರವಿಂದತ್ವವು ಹೇತುವು. ಅರವಿಂದತ್ವ ಹೇತುವು ಗಗನಾರವಿಂದದಲ್ಲಿ ಇಲ್ಲದಿರುವದರಿಂದ ಅಶ್ರಯಾಸಿದ್ಧವಾಯಿತು. (ಗಗನಾರವಿಂದ ಅಂದರೆ ಆಕಾಶ ಕಮಲವು ಅದು ಇಲ್ಲದ್ದರಿಂದ ಹೇತುವಿಗೆ ಅರವಿಂದತ್ವಕ್ಕೆ ಆಶ್ರಯವೇ ಇಲ್ಲದಿರುವದರಿಂದ ಹೇತುವು ಆಶ್ರಯಾಸಿದ್ಧವಾಯಿತು.

೨) ಸ್ವರೂಪಾಸಿದ್ಧವು :- ಶಬ್ದೋ ಗುಣಃ ಚಾಕ್ಷುಷತ್ವಾತ್ , ಈ ಅನುಮಾನದಲ್ಲಿ ಪಕ್ಷವಾದ ಶಬ್ದದಲ್ಲಿ ಚಾಕ್ಷುಷತ್ವ( ಚಕ್ಷುರಿಂದ್ರಿಯದಿಂದ ಜನ್ಯವಾದ ಜ್ಞಾನ ವಿಷಯತ್ವ) ಹೇತುವು ಇಲ್ಲದಿರುವದರಿಂದ ( ಪಕ್ಷದಲ್ಲಿ ಹೇತು ಬಾರದ್ದರಿಂದ ) ಸ್ವರೂಪಾಸಿದ್ಧವಾಯಿತು.

**ತ.ಸ.:- ಸೋಪಾಧಿಕೋ ಹೇತುಃ ವ್ಯಾಪ್ಯತ್ವಾಸಿದ್ಧಃ । ಸಾಧ್ಯ ವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವಂ ಉಪಾಧಿಃ । ಸಾಧ್ಯಸಮಾನಾಧಿ ಕರಣಾತ್ಯಂತಾಭಾವಾಪ್ರತಿಯೋಗಿತ್ವಂ ಸಾಧ್ಯವ್ಯಾಪಕತ್ವಂ । ಸಾಧನವನ್ನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಂ ಸಾಧನಾವ್ಯಾಪಕತ್ವಂ । ಪರ್ವತೋ ಧೂಮವಾನ್ ವಹ್ನಿಮತ್ವಾದಿತ್ಯತ್ರ ಆರ್ದ್ರೇಂಧನ ಸಂಯೋಗ ಉಪಾಧಿಃ ತಥಾಹಿ ಯತ್ರ ಧೂಮಃ ತತ್ರ ಆರ್ದ್ರೇಂಧನ ಸಂಯೋಗ ಇತಿ ಸಾಧ್ಯ ವ್ಯಾಪಕತಾ ಯತ್ರ ವಹ್ನಿಃ ತತ್ರ ಆರ್ದ್ರೇಂಧನ ಸಂಯೋಗೋ ನಾಸ್ತಿ ಅಯೋಗೋಲಕೆ ಆರ್ದ್ರೇಂಧನ ಸಂಯೋಗಾಭಾವಾದಿತಿ ಸಾಧನಾವ್ಯಾಪಕತಾ । ಏವಂ ಸಾಧ್ಯವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವಾತ್ ಆರ್ದ್ರೇಂಧನ ಸಂಯೋಗ ಉಪಾಧಿಃ । ಸೋಪಾಧಿಕತ್ವಾದ್ವಹ್ನಿ ಮತ್ವಂ ವ್ಯಾಪ್ಯತ್ವಾ ಸಿದ್ಧಂ ।**

ಬಾ.ಬೋ:- ವ್ಯಾಪ್ಯತ್ವಾಸಿದ್ಧ ಹೇತುವಿನ ಲಕ್ಷಣ ಹೇಳುತ್ತಾರೆ.

ಉಪಾಧಿಯಿಂದ ಕೂಡಿದ ಹೇತುವು ವ್ಯಾಪ್ಯತ್ವಾಸಿದ್ಧವೆಂದು ಹೇಳಲಾಯಿತು. ಆದರೆ

ಉಪಾಧಿ ಅಂದರೆ ಅದರ ಲಕ್ಷಣ ಯಾವದು ? ಅಂದಲ್ಲಿ ಉಪಾಧಿ ಲಕ್ಷಣ ನಿರೂಪಿಸಲಾಗುತ್ತದೆ. ಉಪಾಧಿ ಅಂದರೆ - ಸಾಧ್ಯಕ್ಕೆ ವ್ಯಾಪಕವಾಗಿ ಸಾಧನಕ್ಕೆ ಅವ್ಯಾಪಕವಾಗಿರುವದೇ ಉಪಾಧಿಯು ಸಾಧ್ಯವ್ಯಾಪಕ ಅಂದರೆ ಸಾಧ್ಯಾಧಿಕರಣ ವೃತ್ತಿ ಸಾಧ್ಯಕ್ಕೆ ಯಾವದು ಅಧಿಕರಣವೋ ಅದರಲ್ಲಿದ್ದ ಅತ್ಯಂತಾಭಾವ ಅದಕ್ಕೆ ಅಪ್ರತಿಯೋಗಿಯಾಗಿರುವದೇ ಉಪಾಧಿಯು ಅದಕ್ಕೆ ಸಾಧ್ಯವ್ಯಾಪಕತ್ವ ಬರುತ್ತದೆ. ಅದರಂತೆ ಸಾಧನಕ್ಕೆ ( ಹೇತುವಿಗೆ) ಅಧಿಕರಣ ಯಾವದು ಆಗಿದೆಯೋ ಅದರ ಅತ್ಯಂತಾಭಾವಕ್ಕೆ ಪ್ರತಿಯೋಗಿ ಆಗಿರುವದೇ ಉಪಾಧಿಯು ಹೀಗೆ ಉಪಾಧಿಯ ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾಗಿರುತ್ತದೆ. ಇದಕ್ಕೆ ಉದಾ :- ಪರ್ವತೋ ಧೂಮವಾನ್ ವಹ್ನಿ ಮತ್ವಾತ್ ಎಂಬ ಅನುಮಾನದಲ್ಲಿ ಆರ್ಧೇಂಧನ ಸಂಯೋಗವು ಉಪಾಧಿ ಆಗುತ್ತದೆ. ಈ ಆರ್ಧೇಂಧನ ಸಂಯೋಗದಲ್ಲಿ ಉಪಾಧಿಲಕ್ಷಣ ಬರುತ್ತದೆ - ಯತ್ರ ಧೂಮಃ ತತ್ರ ಆರ್ಧೇಂಧನ ಸಂಯೋಗ ಈ ಪ್ರಕಾರ ಆರ್ಧೇಂಧನ ಸಂಯೋಗಕ್ಕೆ ಸಾಧ್ಯವ್ಯಾಪಕತ್ವ ಇದೆ. ಯತ್ರ ವಹ್ನಿಃ ತತ್ರ ಆರ್ಧೇಂಧನ ಸಂಯೋಗಃ ಎಂಬುದು ಇಲ್ಲ ಅಯೋಗೋಲಕದಲ್ಲಿ ವಹ್ನಿ ಇದ್ದರೂ ಆರ್ಧೇಂಧನ ಸಂಯೋಗವು ( ಹಸಿ ಕಟ್ಟಿಗೆಯ ಸಂಬಂಧ) ಇಲ್ಲ ಕಾರಣ ಆರ್ಧೇಂಧನ ಸಂಯೋಗಕ್ಕೆ ಸಾಧನಾವ್ಯಾಪಕತ್ವವೂ ಬರುವದರಿಂದ ಅದು ಉಪಾಧಿ ಆಗುತ್ತದೆ. ಈ ಸೋಪಾಧಿಕ (ಉಪಾಧಿಯಿಂದ) ಸಹಿತವಾಗಿದೆ ವಹ್ನಿಮತ್ವಹೇತುವು ಕಾರಣ ವಹ್ನಿಮತ್ವಹೇತುವು ಸೋಪಾಧಿಕವಾಯಿತು ಈ ಕಾರಣದಿಂದ ವಹ್ನಿಮತ್ವಹೇತುವು ವ್ಯಾಪ್ಯತ್ವಾಸಿದ್ಧವಾಯಿತು ಎಂದು ತಿಳಿಯಬೇಕು. ಉಪಾಧಿಯ ಲಕ್ಷಣವಾದ ಸಾಧ್ಯವ್ಯಾಪಕತ್ವ ಸಾಧನ ಅವ್ಯಾಪಕತ್ವ ಇವುಗಳ ಪರಿಷ್ಕಾರದ ವಿವರಣೆ : -ಪರ್ವತೊ ಧೂಮವಾನ್ ವಹ್ನಿ ಮತ್ವಾತ್ ಈ ಅನುಮಾನದಲ್ಲಿ ಆರ್ಧೇಂಧನ ಸಂಯೋಗವು ಉಪಾಧಿಯು ( ಧೂಮವನ್ನು ಕುರಿತು ವಹ್ನಿ ಕಾರಣವಲ್ಲ ಆದರೆ ಆರ್ಧೇಂಧನ ಸಂಯೋಗವೇ ಕಾರಣವಾದ್ದರಿಂದ ಅದು ಉಪಾಧಿಯು ) ಈ ಆರ್ಧೇಂಧನ ಸಂಯೋಗದಲ್ಲಿ ಸಾಧ್ಯಾಧಿಕರಣ ವೃತ್ತಿ (ಸಾಧ್ಯಸಮಾನಾಧಿಕರಣ) ಅತ್ಯಂತಾ ಭಾವಾಪ್ರತಿಯೋಗಿತ್ವ ಲಕ್ಷಣ ಸಾಧ್ಯ ವ್ಯಾಪಕತ್ವ ಬರುತ್ತದೆ. ಹೇಗೆಂದರೆ -ಸಾಧ್ಯ ಧೂಮ ಸಾಧ್ಯಾಧಿಕರಣ ಪರ್ವತ ತದ್ವೃತ್ತಿ ಅತ್ಯಂತಾಭಾವ ( ಅಲ್ಲಿರುವ ಅತ್ಯಂತಾಭಾವ ಅಂದರೆ ಘಟಾಭಾವವು ) ಇದಕ್ಕೆ ಈ ಘಟಾಭಾವಕ್ಕೆ ಪ್ರತಿಯೋಗಿ ಘಟವು . ಅಪ್ರತಿಯೋಗಿಯು ಆರ್ಧೇಂಧನ ಸಂಯೋಗವು (ಉಪಾಧಿಯು) ಇದರಲ್ಲಿ ಸಾಧ್ಯಾಧಿಕರಣವೃತ್ತಿ , ಅತ್ಯಂತಭಾವಾ ಪ್ರತಿಯೋಗಿತ್ವ ಬರುವದಿಂದ ಸಾಧ್ಯವ್ಯಾಪಕತ್ವ ಒಂದು ದಲ ಬಂದಿತು. ಸಾಧನಾ ವ್ಯಾಪಕತ್ವ ಅಂದರೆ-

ಸಾಧನಾದಿಕರಣ ವೃತ್ತಿ ಅತ್ಯಂತಾಭಾವಪ್ರತಿಯೋಗಿತ್ವಂ ಅಂದರೆ - ಸಾಧನ ವಹ್ನಿಯು ಇದಕ್ಕೆ ಅಧಿಕರಣ ಅಯೋಗೋಲಕ (ಕಾದ ಕಬ್ಬಿಣ) ಇದರಲ್ಲಿಯ ಅಭಾವ ಅಂದರೆ ಆರ್ದ್ರೇಂಧನ ಸಂಯೋಗಾ ಭಾವವು (ಕಾದ ಕಬ್ಬಿಣದಲ್ಲಿ ಹಸಿಕಟ್ಟಿಗೆ ಸಂಬಂಧ) ಆರ್ದ್ರೇಂಧನ ಸಂಯೋಗವಿಲ್ಲ ಆರ್ದ್ರೇಂಧನ ಸಂಯೋಗಾಭಾವವಿದೆ. ಇದಕ್ಕೆ ಪ್ರತಿಯೋಗಿಯು ಆರ್ದ್ರೇಂಧನ ಸಂಯೋಗವು. ಇಲ್ಲಿ ಸಾಧನಾಧಿಕರಣ ವೃತ್ತಿ ಅತ್ಯಂತಾಭಾವ ಪ್ರತಿಯೋಗಿತ್ವ ರೂಪ ಸಾಧನಾವ್ಯಾಪಕತ್ವ ಬಂದಿತು. ಹೀಗೆ ಆರ್ದ್ರೇಂಧನ ಸಂಯೋಗ ರೂಪ ಉಪಾಧಿಯಲ್ಲಿ ಸಾಧ್ಯ ವ್ಯಾಪಕತ್ವ ಸಾಧನಾ ವ್ಯಾಪಕತ್ವ ಬರುವದರಿಂದ ಆರ್ದ್ರೇಂಧನ ಸಂಯೋಗವು ವಹ್ನಿ ಅನುಮಾನಕ್ಕೆ ಉಪಾಧಿ ಆಯಿತು. ಸೋಪಾಧಿಕವಾದ ವಹ್ನಿ ರೂಪ ಹೇತುವು ವ್ಯಾಪ್ಯತ್ವಾಸಿದ್ಧವಾಯಿತು.

**ತ.ಸ. :- ಯಸ್ಯ ಸಾಧ್ಯಾಭಾವಃ ಪ್ರಮಾಣಾಂತರೇಣ ನಿಶ್ಚಿತಃ ಸ ಬಾಧಿತಃ । ಯಥಾ ವಹ್ನಿಃ ಅನುಷ್ಣಃ ದ್ರವ್ಯತ್ವಾದಿತಿ । ಅತ್ರಾನುಷ್ಣತ್ವಂ ಸಾಧ್ಯಂ ತದ ಭಾವಃ ಉಷ್ಣತ್ವಂ ಸ್ಪಾರ್ಶನ ಪ್ರತ್ಯಕ್ಷೇಣ ಗ್ರಹ್ಯತೆ ಇತಿ ಬಾಧಿತತ್ವಂ ।**

ಬಾ. ಬೋ :- ಬಾಧಿತ ಹೇತುವಿನ ಲಕ್ಷಣ ಹೇಳುತ್ತಾರೆ.

ಯಸ್ಯ ಹೇತೋಃ ( ಯಾವ ಹೇತುವಿನ ) ಸಾಧ್ಯಾಭಾವಃ ಅನುಷ್ಣತ್ವಾಭಾವಃ ( ಉಷ್ಣತ್ವವು) ಸ್ಪಾರ್ಶನ ಪ್ರತ್ಯಕ್ಷದಿಂದ ( ಸ್ಪರ್ಶೇಂದ್ರಿಯದಿಂದ ನಿಶ್ಚಿತವಾಗಿದೆಯೋ ಅದನ್ನು ಸಾಧನ ಮಾಡತಕ್ಕ ದ್ರವ್ಯತ್ವ ಹೇತುವು ಬಾಧಿತವಾಗುತ್ತೆ ( ಅಭಿಪ್ರಾಯವೇನೆಂದರೆ:- ಸ್ಪಾರ್ಶನ ಪ್ರತ್ಯಕ್ಷ ಪ್ರಮಾಣದಿಂದ ವಹ್ನಿಯಲ್ಲಿ ಉಷ್ಣತ್ವ ನಿಶ್ಚಿತವಾಗಿದೆ ಆದ್ದರಿಂದ ಪ್ರತ್ಯಕ್ಷದಿಂದ ಭಾಧಿತವಾದ ದ್ರವ್ಯತ್ವ ಹೇತುವು ವಹ್ನಿಃ ಅನುಷ್ಣ ಃ ಎಂಬ ಅನುಮಿತಿಯನ್ನು ಹುಟ್ಟಿಸಲಾರದು ಎಂಬ ಭಾವವು)

## ಇತಿ ಅನುಮಾನ ಪರಿಚ್ಛೇದ ಃ



# ಅಥ ಉಪಮಿತಿ ಪರಿಚ್ಛೇದಃ

**ತ.ಸ. :- ಉಪಮಿತಿ ಕರಣಂ ಉಪಮಾನಂ । ಸಂಜ್ಞಾ ಸಂಜ್ಞಿ ಸಂಬಂಧ ಜ್ಞಾನಂ ಉಪಮಿತಿಃ । ತತ್ಕರಣಂ ಸಾದೃಶ್ಯ ಜ್ಞಾನಂ । ಅತಿ ದೇಶ ವಾಕ್ಯಾರ್ಥ ಸ್ಮರಣಮವಾಂತರ ವ್ಯಾಪಾರ ಃ । ತಥಾಹಿ ಗವಯ ಶಬ್ದ ವಾಚ್ಯಂ ಅಜಾನನ್ ಕಶ್ಚಿದಾರಣ್ಯಕ ಪುರುಷಾತ್ ಗೋಸದೃಶೋ ಗವಯಃ ಇತಿ ಶ್ರುತ್ವಾ ವನಂಗತಃ ವಾಕ್ಯಾರ್ಥಂ ಸ್ಮರನ್ ಗೋಸದೃಶಂ ಪಿಂಡಂ ಪಶ್ಯತಿ ತದನಂತರಮ ಸೌ ಗವಯಶಬ್ದ ವಾಚ್ಯ ಇತ್ಯುಪಮಿತಿರುತ್ಪದ್ಯತೆ।**

ಬಾ.ಬೋ :- ಪ್ರಕೃತದಲ್ಲಿ ಉಪಮಾನದ ಲಕ್ಷಣವನ್ನು ನಿರೂಪಿಸಲಾಗುತ್ತದೆ ( ಉಪಮಿತೇಃ ಕರಣಂ ಉಪಮಾನಂ) ಉಪಮಿತಿಗ ಕರಣವಾದದ್ದೇ ಉಪಮಾನ ಪ್ರಮಾಣವು. ಉಪಮಿತಿ ಅಂದರೆ ಸಂಜ್ಞಾ ಸಂಜ್ಞಿ ಜ್ಞಾನವು ( ಅಂದರೆ ನಾಮ ನಾಮಿ ಜ್ಞಾನವು ಅರ್ಥಾತ್ ವಾಚ್ಯ ವಾಚಕ ಸಂಬಂಧ ಜ್ಞಾನವೇ ಉಪಮಿತಿಯು ( ಈ ಉಪಮಿತಿಯ ಉಪಮಾನ ಪ್ರಮಾಣದ ಫಲವು ) ಉಪಮಾನ ಅಂದರೆ ಸಾದೃಶ್ಯ ಜ್ಞಾನವೇ ಉಪಮಾನವು ಅದು ಹೇಗೆಂದರೆ :- ಗವಯ ಅಂದರೆ ಏನು ? ಗವಯದ ಅರ್ಥ ತಿಳಿಯದ ಗ್ರಾಮಸ್ಥನು ಅರಣ್ಯದಲ್ಲಿ ವಾಸಿಸುವ ಪುರುಷನನ್ನು ಕುರಿತು ಗವಯ ಹೇಗಿರುತ್ತದೆ ಎಂದು ಕೇಳಲಾಗಿ ಅರಣ್ಯ ಪುರುಷನು ಗೋ ಸದೃಶೋ ಗವಯ ಃ ಗೋವಿನ ( ಆಕಳದ) ಸದೃಶವಾಗಿರುವ ಪ್ರಾಣಿಯೇ ಗವಯವು ಎಂದು ಹೇಳುತ್ತಾನೆ . ಇದನ್ನು ತಿಳಿದ ಗ್ರಾಮಸ್ಥನು ಅರಣ್ಯವನ್ನು ಕುರಿತು ಹೋಗಿ ಅಲ್ಲಿ ಪೂರ್ವ ವಾಕ್ಯಾರ್ಥ ( ಗೋವಿನ ಸದೃಶವೇ ಗವಯವು ಎಂಬ ವಾಕ್ಯಾರ್ಥವನ್ನು ಸ್ಮರಣೆಗೆ ತಂದುಕೊಂಡು ಅನಂತರದಲ್ಲಿ ಗೋಸದೃಶವಾದ ( ಆಕಳಿನಂತೆ ಇರುವ ಪಿಂಡವನ್ನು ನೋಡುತ್ತಾನೆ. ನಂತರ ಅಸೌ ಗವಯ ಶಬ್ದ ವಾಚ್ಯಃ ) ಅಂದರೆ ಮುಂದೆ ಆಕಳಿನಂತೆ ಕಾಣುವ ಪ್ರಾಣಿಯೇ ಗವಯವು ಎಂದು ತಿಳಿಯುತ್ತಾನೆ. ಈ ಜ್ಞಾನವೇ ಉಪಮಿತಿಯು ಇಲ್ಲಿ ಸಾದೃಶ್ಯ ಜ್ಞಾನವೇ ಕರಣವು ಗೋ ಸದೃಶೋ ಗವಯ ಎಂಬ ಅತಿದೇಶವಾಕ್ಯಾರ್ಥ (ವಾಕ್ಯಾರ್ಥ) ಸ್ಮರಣೆಯೇ ಅವಾಂತರ ವ್ಯಾಪಾರವು ( ಮುಂದೆ ಕಾಣುವ ಪ್ರಾಣಿಯು) ಗವಯ ಪದದಿಂದ ವಾಚ್ಯವು (ಕರೆಯಲ್ಪಡುತ್ತದೆ) ಎಂಬ ಜ್ಞಾನವೇ ಉಪಮಿತಿಯು ( ಫಲವು ) ಎಂದು ತಿಳಿಯಬೇಕು.

**ಇತಿ ಉಪಮಾನ ಪರಿಚ್ಛೇದ ಃ**



# ಅಥ ಶಬ್ದ ಪರಿಚ್ಛೇದಃ

ತ.ಸ. :- ಆಪ್ತವಾಕ್ಯಂ ಶಬ್ದಃ । ಆಪ್ತಸ್ತುಯಥಾರ್ಥವಕ್ತಾ । ವಾಕ್ಯಂ ಪದಸಮೂಹಃ । ಯಥಾ - ಗಾಮಾನಯೇತಿ , ಶಕ್ತಂ ಪದಂ । ಅಸ್ಮಾತ್ಪದಾದಯಮರ್ಥೋ ಬೋದ್ಧವ್ಯ ಇತಿ ಈಶ್ವರೇಚ್ಛಾ ಸಂಕೇತ ಃ ಶಕ್ತಿಃ।

ಬಾ.ಬೋ:- ಕ್ರಮ ಪ್ರಾಪ್ತ ಶಬ್ದದ ಲಕ್ಷಣವನ್ನು ಹೇಳುತ್ತಾರೆ.
ಆಪ್ತ ವಾಕ್ಯವೇ ಶಬ್ದವು ಯಥಾರ್ಥವಾಗಿ ಹೇಳುವವನೇ ಆಪ್ತನು ಇಂಥ ಆಪ್ತನಿಂದ ಉಕ್ತವಾದ ವಾಕ್ಯವೇ ಶಬ್ದ ಪ್ರಮಾಣವು ( ಅಭಿಪ್ರಾಯವೇನೆಂದರೆ - ಯಥಾರ್ಥವಾದ ಅಬಾಧಿತವಾದ ಅರ್ಥವನ್ನು ಉಪದೇಶ ಮಾಡತಕ್ಕವನೇ ಆಪ್ತನು. ಇವನಿಂದ ಉಪದಿಷ್ಟವಾದ ವಾಕ್ಯಪದಾತ್ಮಕ ಶಬ್ದವೇ ಪ್ರಮಾಣವು) ವಾಕ್ಯ ಅಂದರೆ ಪದಗಳ ಸಮೂಹವೇ ಆಗಿದೆ ಉದಾ :- '' ಗಾಮಾನಯ'' ಎಂಬುವದೇ ವಾಕ್ಯವು ( ಇದು ಪದಗಳ ಸಮೂಹವಾಗಿದೆ ಕಾರಣ ವಾಕ್ಯವು ) ಪದದ ಲಕ್ಷಣ ಏನು ಅಂದರೆ - ಶಕ್ತಿಯಿಂದ ಕೂಡಿರುವದೇ ಪದವು ( ಶಕ್ತಿ ವಿಶಿಷ್ಟಂ ಪದಂ ) , ಶಕ್ತಿ ಅಂದರೆ - ಈ ಪದದಿಂದ ಈ ರೀತಿ ಅರ್ಥ ಹೇಳಬೇಕೆಂಬ ಈಶ್ವರೇಚ್ಛಾರೂಪ ಸಂಕೇತವೇ ಶಕ್ತಿಯು, (ವಿ. ಘಟ ಪದದಿಂದ ಘಟರೂಪ ಕಂಬುಗ್ರೀವಾದಿ ಮತ್ ಪದಾರ್ಥ ಅರ್ಥವು ಭೋಧಿತವಾಗಬೇಕೆಂಬ ಈಶ್ವರನ ಇಚ್ಛಾರೂಪ ಸಂಕೇತವೇ ಶಕ್ತಿ ಆಗಿದೆ. )

ತ.ಸ.: - ಆಕಾಂಕ್ಷಾಯೋಗ್ಯತಾ ಸನ್ನಿಧಿಶ್ಚ ವಾಕ್ಯಾರ್ಥ ಜ್ಞಾನ ಹೇತುಃ । ಪದಸ್ಯ ಪದಾಂತರ ವ್ಯತಿರೇಕ ಪ್ರಯುಕ್ತಾನ್ವಯಾಽನನುಭಾವಕತ್ವಂ ಆಕಾಂಕ್ಷಾ । ಅರ್ಥಾಽಬಾಧೋಯೋಗ್ಯತಾ । ಪದಾನಾಮವಿಲಂಬೇನೋಚ್ಚಾರಣಂ ಸನ್ನಿಧಿಃ । ಆಕಾಂಕ್ಷಾದಿರಹಿತ ವಾಕ್ಯಮಪ್ರಮಾಣಂ ಯಥಾ ''ಗೌರಶ್ವಃ ಪುರುಷೋ ಹಸ್ತೀತಿ'' ನ ಪ್ರಮಾಣಂ ಆಕಾಂಕ್ಷಾ ವಿರಹಾತ್ । ಅಗ್ನಿನಾಸಿಂಚೇದಿತಿ ನ ಪ್ರಮಾಣಂ ಯೋಗ್ಯತಾವಿರಹಾತ್ ಪ್ರಹರೆ ಪ್ರಹರೇಽಸಹೋಚ್ಚರಿತಾನಿ ಗಾಮಾನಯೇತ್ಯಾದಿ ಪದಾನಿ ನ ಪ್ರಮಾಣಂ ಸನ್ನಿಧ್ಯಭಾವಾತ್ ।

ಬಾ. ಬೋ :- ವಾಕ್ಯಾರ್ಥ ಜ್ಞಾನಕ್ಕೆ ಉಪಯುಕ್ತ ಸಹಕಾರಿ ಕಾರಣಗಳನ್ನು ನಿರೂಪಿಸುತ್ತಾರೆ.

ಆಕಾಂಕ್ಷಾ ಲಕ್ಷಣದ ಅರ್ಥ : - ಪದಸ್ಯ ಗಾಮಿತ್ಯಾಕಾರಕ ಪದದ ಪದಾಂತ- ರಾನ್ವಯಾನನುಭಾವಕತ್ವಂ - ಪದಾಂತರದ ಗೋಪದದಿಂದ ಭಿನ್ನವಾದ ಆನಯ ಎಂಬ ಪದವು ಅದರ ವ್ಯತಿರೇಕ - ಅನ್ವಯ ಪದಾಭಾವವು ಆನಯ ಪದಾಭಾವ ಪ್ರಯುಕ್ತ ವಾಕ್ಯಾರ್ಥ ಬೋಧವಾಗದೇ ಇರುವದೇ ಆಕಾಂಕ್ಷೇಯು (ವಿವರಣೆ:- ಗೋವನ್ನು ತೆಗೆದಕೊಂಡು ಬಾ ಎಂಬ ವಾಕ್ಯದಲ್ಲಿ ( ಗಾಂ ಆನಯ ಎಂಬ ವಾಕ್ಯದಲ್ಲಿ) ಗಾಂ ಎಂಬ ಪದವಿದ್ದರೂ ಆನಯ ಎಂಬ ಪದವು ಆ ವಾಕ್ಯದಲ್ಲಿ ಇಲ್ಲದಿದ್ದರೆ ಆವಾಗ'' ಗಾಂ ಆನಯ'' ( ಗೋವನ್ನು ತೆಗೆದುಕೊಂಡು ಬಾ ) ಎಂಬ ವಾಕ್ಯದ ಅರ್ಥ ಜ್ಞಾನವೇ ಆಗಲಾರದು ಕಾರಣ ಕೇವಲ '' ಗಾಂ'' ( ಗೋವನ್ನು ) ಎಂಬ ಪದವು ಸಾಕಾಂಕ್ಷಿತವಾಗುತ್ತದೆ ( ಅದು ಒಂದು ಪದವನ್ನು ಅಪೇಕ್ಷಿಸುತ್ತದೆ. ಹೀಗೆ ಅಪೇಕ್ಷಿಪಡುವದೇ ಆಕಾಂಕ್ಷೆಯು ಎಂದು ತಿಳಿಯಬೇಕು) ಅಭಿಪ್ರಾಯವೆನೆಂದರೆ : - ಗಾಂ ಆನಯ ಎಂಬ ವಾಕ್ಯ ಘಟಕೀ ಭೂತ ಗೋ ಪದವು ಇದಕ್ಕೆ '' ಆಮ್ '' ಪದ ಇಲ್ಲದಿದ್ದರೆ '' ಗಾಂ ಆನಯ'' ಎಂಬ ನಿಶ್ಚಯವಾಗಲಾರದು ಕಾರಣ'' ಆಮ್ '' ಪದ ಇದ್ದರೆ ಗೋ ಪದವು ಆಮ್ ಪದದಿಂದ ಸಂಬಂಧವನ್ನು ಹೊಂದಿ (ಗೋವನ್ನು ತೆಗೆದುಕೊಂಡು ಬಾ ಎಂಬ ನಿಶ್ಚಯಕ್ಕೆ ಕಾರಣವಾಗುತ್ತದೆ ಕಾರಣ ಗೋ ಪದಕ್ಕೆ '' ಆಮ್ '' ಪದದ ( ಅಪೇಕ್ಷಿ) ಇರುವದೇ ಆಕಾಂಕ್ಷೆಯು.

ಯೋಗ್ಯತಾ ಅಂದರೆ :- ಅರ್ಥಾಬಾಧೋಯೋಗ್ಯತಾ ಅಂದರೆ ( ಅರ್ಥಯೋಃ ಅಬಾಧಃ ಅರ್ಥಗಳಿಗೆ ಪರಸ್ಪರ ಸಂಬಂಧವೇ ಯೋಗ್ಯತಾ ಹೇಗೆಂದರೆ:- '' ಜಲೇನ ಸಿಂಚತಿ '' ಜಲದಿಂದ ಸೇಚನ ಮಾಡುತ್ತಾನೆ ಎಂಬಲ್ಲಿ ಜಲ ದಲ್ಲಿ ಸೇಚನ ಕ್ರಿಯಾ ಸಂಬಂದ ವಿರುವದರಿಂದ ಆ ವಾಕ್ಯಕ್ಕೆ ಯೋಗ್ಯತಾ ಇದೆ. ಆದರೆ'' ಅಗ್ನಿನಾ ಸಿಂಚತಿ '' ( ಅಗ್ನಿಯಿಂದ ಸೇಚನ ಮಾಡುತ್ತಾನೆ ಎಂಬಲ್ಲಿ ಅಗ್ನಿಗೂ ಸೇಚನ ಕ್ರಿಯಾಕ್ಕೂ ಸಂಬಂಧ ಇಲ್ಲದಿರುವದರಿಂದ ಆ ವಾಕ್ಯವು ಯೋಗ್ಯರಹಿತವಾಗಿ ಅಪ್ರಮಾಣವಾಗುತ್ತದೆ. ಸನ್ನಿಧಿ ಅಂದರೆ:- ಒಂದೊಂದು ಪ್ರಹರಕ್ಕೆ ಒಂದು ಪದವನ್ನು ಉಚ್ಚಾರಣೆ ಮಾಡಿದಲ್ಲಿ ಆ ವಾಕ್ಯಕ್ಕೆ ಸನ್ನಿಧಿ ಇಲ್ಲವೆಂದು ತಿಳಿಯಬೇಕು ಅವಿಲಂಬದಿಂದ ( ವಿಲಂಬ ಇಲ್ಲದೆ ಉಚ್ಚರಿತವಾದ) ಉಚ್ಚರಿತವಾದ ಪದಗಳಲ್ಲಿ ಸನ್ನಿಧಿ ಇರುತ್ತದೆ.

**ತ.ಸ.:- ವಾಕ್ಯಂದ್ವಿವಿಧಂ । ವೈದಿಕಂ ಲೌಕಿಕಂಚ । ವೈದಿಕಂ ಈಶ್ವರೊಕ್ತ**

**ತ್ವಾತ್ ಸರ್ವಮೇವ ಪ್ರಮಾಣಂ । ಲೌಕಿಕಂ ತು ಆಪ್ತೋಕ್ತ ತ್ವಾತ್ ಪ್ರಮಾಣಂ । ಅನ್ಯದ ಪ್ರಮಾಣಂ । ವಾಕ್ಯಾರ್ಥಜ್ಞಾನಂ ಶಾಬ್ದ ಜ್ಞಾನಂ ತತ್ಕರಣಂ ಶಬ್ದಃ ।**

ಬಾ. ಬೋ:- ವಾಕ್ಯದ ವಿಭಾಗ ಹೇಳುತ್ತಾರೆ.

ವಾಕ್ಯವು ಎರಡು ಪ್ರಕಾರ ವೈದಿಕವು ಲೌಕಿಕವು. ವೈದಿಕವು (ವೇದವು) ಈಶ್ವರನಿಂದ ಉಕ್ತವಾದ ಕಾರಣ ಸರ್ವವೂ ಪ್ರಮಾಣವೇ ಲೌಕಿಕವು (ವಾಕ್ಯವು) ಆಪ್ತನಿಂದ ಉಚ್ಚರಿತವಾದಾಗ ಮಾತ್ರ ಪ್ರಮಾಣವಾಗುತ್ತದೆ. ಇಲ್ಲಿ ವಾಕ್ಯಾರ್ಥ ಜ್ಞಾನವೇ ಫಲವು ಶಬ್ದವು ಕರಣವು ವಾಕ್ಯರ್ಥಸ್ಮರಣೆಯು ವ್ಯಾಪಾರವು ಎಂದು ತಿಳಿಯಬೇಕು.

**ಇತಿ ಶಬ್ದ ಪರಿಚ್ಛೇದ ಃ**



ಅಯಥಾರ್ಥ ವಿಭಾಗ ಮಾಡಲಾಗುತ್ತದೆ .

ತ.ಸ. :- ಆಯಥಾರ್ಥಾನುಭವಸ್ತ್ರಿವಿಧಃ ಸಂಶಯ ವಿಪರ್ಯಯತರ್ಕ ಭೇದಾತ್ । ಏಕಸ್ಮಿನ್ ಧರ್ಮಿಣಿ ವಿರುದ್ಧ ನಾನಾಧರ್ಮ ವಿಶಿಷ್ಟಾವಗಾಹಿ ಜ್ಞಾನಂ ಸಂಶಯಃ । ಯಥಾ ಸ್ಥಾಣುರ್ವಾ ಪುರುಷೋವಾ ಇತಿ । ಮಿಥ್ಯಾಜ್ಞಾನಂ ವಿಪರ್ಯಯಃ ಯಥಾ ಶುಕ್ತೌ ಇದಂ ರಜತ ಮಿತಿ । ವ್ಯಾಪ್ಯಾರೋಪೇಣ ವ್ಯಾಪಕಾರೋಪಸ್ತರ್ಕಃ ಯಥಾ ಯದಿ ವಹ್ನಿರ್ನಸ್ಯಾತ್ ತರ್ಹಿ ಧೂಮೋಽಪಿನಸ್ಯಾದಿತಿ । ಸ್ಮೃತಿರಪಿ ದ್ವಿವಿಧಾ ಯಥಾರ್ಥಾಯಥಾರ್ಥಾಚ । ಪ್ರಮಾಜನ್ಯಾ ಯಥಾರ್ಥಾ । ಆಪ್ರಮಾ ಜನ್ಯಾ ಅಯಥಾರ್ಥಾ ।

ಬಾ. ಬೋ :- ಪೂರ್ವೋಕ್ತ ಅಯಥಾರ್ಥಾನುಭವವು ಮೂರು ಪ್ರಕಾರ ಇರುತ್ತದೆ. ಸಂಶಯ ವಿಪರ್ಯಯ ತರ್ಕವೆಂದು, ಇವುಗಳಲ್ಲಿ ಸಂಶಯ ಅಂದರೆ - ಏಕಸ್ಮಿನ್ ಧರ್ಮಿಣಿ ವಿರುದ್ಧ ನಾನಾಧರ್ಮ ವಿಶಿಷ್ಟಾವಗಾಹಿ ಜ್ಞಾನಂ ಇಲ್ಲಿ ವಿಗ್ರಹವು ಏಕಸ್ಮಿನ್ ಧರ್ಮಿಣಿ ( ಪುರೋವರ್ತಿ ಪದಾರ್ಥೆ) ವಿರುದ್ಧಾಃ ಯೇ ನಾನಾಧರ್ಮಾಃ ಸ್ಥಾಣುತ್ವ ಪುರುಷತ್ವಾದಯಃ ತೇಷಾಂ ( ಅವುಗಳ ) ವೈಶಿಷ್ಟ್ಯಂ - ಸಂಬಂಧಃ ತದವಗಾಹಿ ಜ್ಞಾನಂ ಸಂಶಯಃ ( ವಿ. ಪುರೋವರ್ತಿಯಾದ ಪದಾರ್ಥ ದಲ್ಲಿ ಮುಂದೆ ತೋರತಕ್ಕ ಸ್ಥಾಣುವಿನಲ್ಲಿ) ವಿರುದ್ಧ ವಾದ ನಾನಾ ಧರ್ಮಗಳು ಅಂದರೆ ಸ್ಥಾಣುತ್ವ ಪುರುಷತ್ವ ಧರ್ಮ ಇವುಗಳ ಸಂಬಂಧವನ್ನು ಗ್ರಹಿಸತಕ್ಕ ಜ್ಞಾನವೆಂದರೆ ( ಆಯಂ ಸ್ಥಾಣುರ್ವಾ ಪುರುಷೋವಾ) ಇದು ಸ್ಥಾಣುವೋ ( ಅಂದರೆ ಮೋಟು ಮರವೋ) ಪುರುಷನೋ ಎಂಬ ಸಂಶಯ ಇಲ್ಲಿ ಉಕ್ತ ಲಕ್ಷಣ ಸಮನ್ವಯವಾಗುತ್ತದೆ. ವಿಪರ್ಯಯ ಅಂದರೆ - ಮಿಥ್ಯಾಜ್ಞಾನವು ( ಆಯಥಾರ್ಥ ಜ್ಞಾನವು ಹಿಂದಿನಂತೆ ತದಭಾವವತಿ ತತ್ಪ್ರಕಾರಕ ಜ್ಞಾನವು.)

ತರ್ಕ ಅಂದರೆ ವ್ಯಾಪ್ಯಾರೋಪೇಣ ವ್ಯಾಪಕಾರೋಪಃ ತರ್ಕಃ ಇದರ ಅರ್ಥ - ವ್ಯಾಪ್ಯವಾದ ವಹ್ನಿ ಅಭಾವದ ಆರೋಪದಿಂದ ( ಪರ್ವತದಲ್ಲಿ ವಹ್ನಿ ಇದ್ದರೂ ವಹ್ನಿ ಅಭಾವ ಆರೋಪದಿಂದ )ವ್ಯಾಪಕಾರೋಪವು ( ಧೂಮಾಭಾವದ ಆರೋಪವು ತರ್ಕವು) ( ಆ ತರ್ಕದ ಆಕಾರ:- '' ಯದಿ ವಹ್ನಿರ್ನಸ್ಯಾತ್ ತರ್ಹಿ ಧೂಮೊಪಿ

ನಸ್ಯಾತ್'' ಎಂದು, ಹೀಗೆ ಹೇಳಿದರೆ ಪಕ್ಷವಾದ ಪರ್ವತದಲ್ಲಿ ವಹ್ನಿ ಇಲ್ಲವೆಂದಾದರೆ ಆವಾಗ ಧೂಮವು ಕೂಡ ಇಲ್ಲದೇ ಹೋಗಲಿ ಇಲ್ಲಿ ವ್ಯಾಪ್ಯವಾದ ವಹ್ನಿ ಅಭಾವಾರೋಪದಿಂದ ( ವಹ್ನಿ ಇದ್ದರೂ ವಹ್ನಿ ಅಭಾವವನ್ನು ಪರ್ವತದಲ್ಲಿ ಆರೋಪ ಮಾಡುವದರಿಂದ ವ್ಯಾಪಕವಾದ ಧೂಮದ ಅಭಾವವೂ ಇರಲಿ ಎಂದು ಹೇಳುವದೇ ತರ್ಕವು ).

ಸ್ಮೃತಿಯು ಎರಡು ಪ್ರಕಾರ ಯಥಾರ್ಥ, ಅಯಥಾರ್ಥ ಎಂದು. ಪ್ರಮಾಜನ್ಯವಾದುದು ಯಥಾರ್ಥವು, ಅಪ್ರಮಾಜನ್ಯವಾದದ್ದು ಅಯಥಾರ್ಥವು.

**ತ.ಸ. :- ಸರ್ವೆಷಾಮನುಕೂಲವೇದನಿಯಂ ಸುಖಂ । ಪ್ರತಿಕೂಲ ವೇದನಿಯಂ ದುಃಖಂ । ಇಚ್ಛಾ ಕಾಮಃ । ಕ್ರೋಧೋದ್ವೇಷಃ । ಕೃತಿಃ ಪ್ರಯತ್ನಃ । ವಿಹಿತ ಕರ್ಮ ಜನ್ಯೋ ಧರ್ಮಃ । ನಿಷಿದ್ಧಕರ್ಮ ಜನ್ಯಸ್ತ್ವಧರ್ಮಃ । ಬುದ್ಧ್ಯಾದಯೋಽಷ್ಟಾವಾತ್ಮ ಮಾತ್ರ ವಿಶೇಷಗುಣಾಃ । ಬುದ್ಧೀಚ್ಛಾಪ್ರಯತ್ನಾಃ ದ್ವಿವಿಧಾಃ । ನಿತ್ಯಾ ಅನಿತ್ಯಾಶ್ಚ ನಿತ್ಯಾ ಈಶ್ವರಸ್ಯ । ಅನಿತ್ಯಾ ಜೀವಸ್ಯ ।**

ಬಾ. ಬೋ :- ಸುಖ ದುಃಖಾದಿಗಳ ಲಕ್ಷಣಗಳನ್ನು ಹೇಳುತ್ತಾರೆ.

ನನಗೆ ಇದೆ ಇಷ್ಟವೆಂದು ತಿಳಿಯುವದಕ್ಕೆ ವಿಷಯವಾದದ್ದೇ ಸುಖವು ನನಗೆ ಇದು ಅನಿಷ್ಟವೆಂದು ತಿಳಿಯುವದಕ್ಕೆ ವಿಷಯವಾದದ್ದೇ ದುಃಖವು, ಇಚ್ಛಾಕಾಮಃ ಇವೆರಡು ಪರ್ಯಾಯಗಳು ಇಚ್ಛಾತ್ವಜಾತಿ ಉಳ್ಳದ್ದೇ ಇಚ್ಛೆಯು ಇದು ಎರಡು ಪ್ರಕಾರ ಫಲೇಚ್ಛಾ, ಉಪಾಯೇಚ್ಛಾ , ಫಲಂ ಸುಖಾದಿ ತದಿಚ್ಛಾ ಫಲೇಚ್ಛಾ, ಉಪಾಯ ಅಂದರೆ ಯಜ್ಞಾದಿಗಳು ಅವುಗಳ ಇಚ್ಛಾ - ಉಪಾಯೇಚ್ಛಾ, ಕ್ರೋಧವೇ ದ್ವೇಷ : ( ದ್ವೇಷ್ಮೀತಿ ಅನುಭವಸಿದ್ಧ ದ್ವೇಷತ್ವ ಜಾತಿಮಾನ್ ದ್ವೇಷ ಅಂದರೆ - ದ್ವೇಷಿಸುತ್ತಾನೆ ಎಂಬ ಅನುಭ ಸಿದ್ಧ ಜಾತಿ ಉಳ್ಳದ್ದೇ ದ್ವೇಷವು ) ಕೃತಿಃ ಪ್ರಯತ್ನ - ಪ್ರಯತ್ನತ್ವ ಜಾತಿ ಉಳ್ಳದ್ದೇ ಪ್ರಯತ್ನವು , ವಿಹಿತ ಕರ್ಮಜನ್ಯೋ ಧರ್ಮಃ (ವೇದ ವಿಹಿತ ಯಾಗಾದಿ ಕರ್ಮ ಜನ್ಯವಾದ ಗುಣವೇ ಧರ್ಮವು) ನಿಷಿದ್ಧ ಕರ್ಮ ಜನ್ಯಸ್ತು ಅಧರ್ಮಃ ವೇದದಿಂದ ನಿಷಿದ್ಧವಾದ ಸುರಾಪಾನಾದಿಗಳಿಂದ ಜನ್ಯವಾದ ಗುಣವೇ ಅಧರ್ಮವು ಬುದ್ದೀಚ್ಛಾಪ್ರಯತ್ನ ಮೊದಲಾದ ಎಂಟು ಗುಣಗಳು ಆತ್ಮನಲ್ಲಿ ಮಾತ್ರ ಪ್ರಸಿದ್ಧ ಇರುತ್ತವೆ. ಈ ಬುದ್ಧೀಚ್ಛಾ ಪ್ರಯತ್ನಗಳು ಎರಡು ಪ್ರಕಾರ ನಿತ್ಯವು ಹಾಗೂ ಅನಿತ್ಯವು. ನಿತ್ಯವಾದ ಬುದ್ದಿ ಇಚ್ಛಾ ಪ್ರಯತ್ನಗಳು ಈಶ್ವರನಲ್ಲಿರುತ್ತವೆ , ಅನಿತ್ಯ

ವಾದವುಗಳು ಜೀವನಲ್ಲಿರುತ್ತವೆ.

**ತ.ಸ. :- ಸಂಸ್ಕಾರಃ ತ್ರಿವಿಧಃ ವೇಗೋ ಭಾವನಾ ಸ್ಥಿತಿಸ್ಥಾಪಕಶ್ಚೇತಿ । ವೇಗಃ ಪೃಥಿವ್ಯಾದಿಚತುಷ್ಟಯ ಮನೋವೃತ್ತಿಃ । ಅನುಭವ ಜನ್ಯಾ ಸ್ಮೃತಿ ಹೇತುರ್ಭಾವನಾ । ಆತ್ಮ ಮಾತ್ರ ವೃತ್ತಿಃ । ಅನ್ಯಥಾ ಕೃತಸ್ಯ ಪುನಸ್ತಾದ ವಸ್ಥ್ಯಾಪಾದಕಃ ಸ್ಥಿತಿ ಸ್ಥಾಪಕಃ । ಕಟಾದಿ ಪೃಥವಿ ವೃತ್ತಿಃ । ಇತಿ ಗುಣಾಃ।**

ಬಾ. ಬೋ :- ಸಂಸ್ಕಾರದ ವಿಭಾಗವನ್ನು ನಿರೂಪಿಸುತ್ತಾರೆ.

ಈ ಸಂಸ್ಕಾರವು ಮೂರು ವಿಧ ಇರುತ್ತದೆ ೧) ವೇಗವು ೨) ಭಾವನಾ ೩) ಸ್ಥಿತಿ ಸ್ಥಾಪಕ. ಇವುಗಳಲ್ಲಿ ೧) ವೇಗವು : - ಪೃಥವಿ ಆಪ್ ತೇಜಸ್ಸು ವಾಯು, ಹಾಗೂ ಮನಸ್ಸಿನಲ್ಲಿ ಇರುತ್ತದೆ ೨) ಭಾವನಾ :-ಅನುಭವದಿಂದ ಜನ್ಯವಾದ ಸ್ಮರಣವೇ ಭಾವನೆಯು , ಈ ಭಾವನಾ ಆತ್ಮನಲ್ಲಿ ಮಾತ್ರ ಇರುತ್ತದೆ. ೩) ಸ್ಥಿತಿ ಸ್ಥಾಪಕ :- ಅನ್ಯಥಾ ಕೃತ ವಾದದ್ದನ್ನು ಪುನಃ ಪೂರ್ವದಂತೆ ಮಾಡುವದೇ ಸ್ಥಿತಿ ಸ್ಥಾಪಕವು ಉದಾ :- ಕಟಾದಿ - ಚಾಪೆಯನ್ನು ಬಿಚ್ಚಿದಾಗ ಪುನಃ (ಮತ್ತೆ) ಮೊದಲಿನಂತೆ ಸುತ್ತಿಕೊಳ್ಳುತ್ತದೆ. ಇದೇ ಸ್ಥಿತಿ ಸ್ಥಾಪಕವು ಪೃಥವಿ ವೃತ್ತಿಯಾಗಿದೆ, ಅಥವಾ ವೃಕ್ಷದ ಟೊಂಗೆಯನ್ನು ಕೆಳಗೆ ಜಗ್ಗಿದಾಗ ಕೆಳಗೆ ಬಗ್ಗುತ್ತದೆ ಅದನ್ನು ಬಿಟ್ಟಾಗ ಪೂರ್ವದಂತೆ ಆಗುತ್ತದೆ. ಇದೇ ಸ್ಥಿತಿ ಸ್ಥಾಪಕವು. ಎಂದು ಅಭಿಪ್ರಾಯವು.

**ತ.ಸ.:- ಚಲನಾತ್ಮಕಂ ಕರ್ಮ । ಉರ್ಧ್ವದೇಶ ಸಂಯೋಗ ಹೇತುರು ತ್ಕ್ಷೇಪಣಂ । ಅಧೋದೇಶ ಸಂಯೋಗ ಹೇತುರಪಕ್ಷೇಪಣಂ । ಶರೀರಸ್ಯ ಸನ್ನಿ ಕೃಷ್ಟ ಸಂಯೋಗ ಹೇತುರಾಕುಂಚನಂ । ವಿಪ್ರಕೃಷ್ಟ ಸಂಯೋಗ ಹೇತುಃ ಪ್ರಸಾರಣಂ । ಅನ್ಯತ್ಸರ್ವಂ, ಗಮನಂ । ಪೃಥಿವ್ಯಾದಿ ಚತುಷ್ಟಯ ಮನೋ ವೃತ್ತಿ ।**

ಬಾ. ಬೋ :- ಕರ್ಮವನ್ನು ನಿರೂಪಿಸುತ್ತಾರೆ.

ಚಲನಾತ್ಮಕವಾದುದ್ದೇ ಕರ್ಮ. ೧) ಉರ್ಧ್ವ ದೇಶದ ಸಂಯೋಗವೇ ಉತ್ ಕ್ಷೇಪಣ ಕರ್ಮ ಒಂದು ವಸ್ತುವನ್ನು ಮೇಲಕ್ಕೆ ಒಗೆದಾಗ ಉರ್ಧ್ವದೇಶ ಸಂಯೋಗವು ಆ ವಸ್ತುವಿಗೆ ಆಗುತ್ತದೆ, ಅದೇ ಉತ್ ಕ್ಷೇಪಣವು. ೨) ಅಧೋದೇಶ ಸಂಯೋಗವೇ ಅಪಕ್ಷೇಪಣವು (ಒಂದು ವಸ್ತುವನ್ನು ಕೆಳಗೆ ಒಗೆದಾಗ ಅದಕ್ಕೆ ಅಧೋದೇಶದ ಸಂಯೋಗವಾಗುತ್ತದೆ, ಆದೇ ಅಪಕ್ಷೇಪಣ ಕರ್ಮ. ೩) ಶರೀರವು ಸಂಕೋಚನ

ಗೊಳಿಸುವದಕ್ಕೆ ಹೇತು ಕಾರಣವಾದದ್ದೆ ಆಕುಂಚನ ಕರ್ಮ. ೪) ಶರೀರವನ್ನು ಹಿಗ್ಗಿಸುವದಕ್ಕೆ ಕಾರಣವಾದದ್ದೆ ಪ್ರಸಾರಣ ಕರ್ಮ. ೫) ಉಳಿದ ಕರ್ಮಗಳು ಗಮನದಲ್ಲಿಯೇ ಅಂತರ್ಭಾವ ಹೊಂದುತ್ತವೆ. ಆದ್ದರಿಂದ ಐದೇ ಕರ್ಮಗಳು.

**ತ.ಸ. :- ನಿತ್ಯಮೇಕ ಮನೇಕಾನುಗತಂ ಸಾಮಾನ್ಯಂ । ದ್ರವ್ಯ ಗುಣ ಕರ್ಮ ವೃತ್ತಿ । ತದ್ ದ್ವಿವಿಧಂ ಪರಾಪರಭೇದಾತ್ । ಪರಂ ಸತ್ತಾ ಅಪರಂ ಜಾತಿ ದ್ರವ್ಯತ್ವಾದಿಃ ।**

ಬಾ.ಬೋ: - ನಿತ್ಯವಾಗಿ ಅನೇಕ ವಸ್ತುಗಳಲ್ಲಿ ಅನುಗತವಾಗಿರುವದೇ ಸಾಮಾನ್ಯವು ( ಜಾತಿಯು). ಈ ಜಾತಿಯು (ಸಾಮಾನ್ಯವು) ದ್ರವ್ಯ ಗುಣಕರ್ಮದಲ್ಲಿ ಇರುತ್ತದೆ. ಇದು ಎರಡು ವಿಧ ೧) ಪರಸಾಮಾನ್ಯ ೨) ಅಪರಸಾಮಾನ್ಯ ವು. ಪರಸಾಮಾನ್ಯ ಅಂದರೆ ಸತ್ತಾ ( ಅಸ್ತಿತ್ವವು ಎಲ್ಲದರಲ್ಲಿ ಇರುವದರಿಂದ ಅದು ಪರಸಾಮಾನ್ಯವು ) ಅಪರಸಾಮಾನ್ಯವು ದ್ರವ್ಯತ್ವಾದಿಗಳಲ್ಲಿರುತ್ತದೆ.

**ತ.ಸ. :- ನಿತ್ಯ ದ್ರವ್ಯ ವೃತ್ತಯೋ ವ್ಯಾವರ್ತಕಾಃ ವಿಶೇಷಾಃ ।**

ನಿತ್ಯ ದ್ರವ್ಯಗಳಾದ ಪರಮಾಣುಗಳಲ್ಲಿ ಪರಸ್ಪರ ಭೇದ ಜ್ಞಾನವನ್ನು ಹುಟ್ಟಿಸತಕ್ಕವುಗಳೇ ವಿಶೇಷಗಳು

**ತ.ಸ.:- ನಿತ್ಯಃ ಸಂಬಂಧಃ ಸಮವಾಯಃ, ಅಯುತಸಿದ್ಧವೃತ್ತಿಃ। ಯಯೋರ್ದ್ವಯೋರ್ಮಧ್ಯೇ ಏಕಮಪರಾ ಶ್ರಿತಮೇವಾವತಿಷ್ಟತೆ ತಾವಯುತ ಸಿದ್ಧೌ ಅವಯವಾವಯವಿನೌ ಗುಣ ಗುಣಿನೌ ಕ್ರಿಯಾ ಕ್ರಿಯಾವಂತೌ ಜಾತಿ ವ್ಯಕ್ತಿ ವಿಶೇಷ ನಿತ್ಯದ್ರವ್ಯೆಚೇತಿ ।**

ಬಾ.ಬೋ: - ನಿತ್ಯ ಸಂಬಂಧವೇ ಸಮವಾಯವು, ಈ ಸಮವಾಯವು ಅಯುತ ಸಿದ್ಧವೃತ್ತಿ ಆಗಿದೆ. ಅಯುತ ಸಿದ್ದವೆಂದರೆ- ಒಂದನ್ನೊಂದು ಬಿಡದೇ ಇರತಕ್ಕ ವಸ್ತುಗಳು ( ಪರಸ್ಪರ ಹೊಂದಿಕೊಂಡೇ ಇರುತ್ತವೆ ) ಅವುಯಾವವು ಅಂದರೆ ೧) ಅವಯಾವ ಅವಯವಿಗಳು ( ಪಟ ಅವಯವಿ ಇವುಗಳ ಅವಯವ ಅಂದರೆ ಗೇಣು, ಮೋಳ

ಇತ್ಯಾದಿಗಳು ಇವು ಒಂದನ್ನೊಂದು ಬಿಟ್ಟು ಇರದಿರುವದರಿಂದ ಈ ಅವಯವ ಅವಯವಿಗಳಿಗೆ ನಿತ್ಯ ಸಂಬಂಧ ಇರುವದು ಅದೇ ಸಮವಾಯ ಸಂಬಂಧವು )
೨) ಗುಣಗುಣಿಗಳು - ( ಘಟ ನೀಲ ರೂಪ ಇಲ್ಲಿ ಘಟ ಗುಣಿ, ನೀಲ ಗುಣ ) ನೀಲರೂಪಕ್ಕೂ ಘಟಕ್ಕೂ ನಿತ್ಯ ಸಂಬಂಧವಿದೆ ಇದೇ ಸಮವಾಯ ಸಂಬಂಧ. ಕ್ರಿಯಾ ಕ್ರಿಯಾವತಃ (ಪಟ ಅದರ ಚಲನೆ ) ಹಾಗೂ ಜಾತಿ ವ್ಯಕ್ತಿ (ಘಟ ಘಟತ್ವ, ಘಟವ್ಯಕ್ತಿ ಘಟತ್ವಜಾತಿ ಇವುಗಳಿಗೂ ಹಾಗೂ ವಿಶೇಷ ನಿತ್ಯ ದ್ರವ್ಯಗಳಿಗೂ ನಿತ್ಯ ಸಂಬಂಧ ಇರುವದರಿಂದ ಸಮಾಯ ಸಂಬಂಧವೆಂದು ಹೇಳಬೇಕು.

**ತ.ಸ. :- ಅನಾದಿಃ ಸಾಂತಃ ಪ್ರಾಗ್ ಭಾವಃ । ಉತ್ಪತ್ತೇಃ ಪೂರ್ವಂ ಕಾರ್ಯಸ್ಯ ।ಸಾದಿರನಂತಃ ಪ್ರಧ್ವಂಸಃ। ಉತ್ಪತ್ತ್ಯನಂತರಂ ಕಾರ್ಯಸ್ಯ। ತ್ರೈಕಾಲಿಕ ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕೋಽತ್ಯಂತಾಭಾವ ಃ । ಯಥಾ ಭೂತಲೆ ಘಟೋ ನಾಸ್ತೀತಿ । ತಾದಾತ್ಮ್ಯ ಸಂಬಂಧಾವಚ್ಛಿನ್ನ ಪ್ರತಿಯೋಗಿತಾಕೋಽನ್ಯೋಽನ್ಯಾಭಾವಃ । ಯಥಾ ಘಟಃ ಪಟೋ ನ ಭವತೀತಿ ಸರ್ವೇಷಾಂ ಪದಾರ್ಥಾನಾಂ ಯಥಾ ಯಥಂ ಉಕ್ತೇಷ್ವಂತ ರ್ಭಾವಾತ್ ಸಪ್ತೈವ ಪದಾರ್ಥಾ ಇತಿ ಸಿದ್ಧಂ ।**

ಬಾಬೋ:- ಅಭಾವ ಪದಾರ್ಥವನ್ನು ವಿಸ್ತಾರವಾಗಿ ಹೇಳುತ್ತಾರೆ
೧) ಪ್ರಾಗ್ ಭಾವ ಅಂದರೆ ಪದಾರ್ಥ ಉತ್ಪತ್ತಿ ಪೂರ್ವದಲ್ಲಿದ್ದ ಅಭಾವವೇ ಪ್ರಾಗ್ ಭಾವವು ಉದಾ: - ಇಹ ತಂತುಷು ಪಟೋಭವಿಷ್ಯತಿ ಎಂಬುವದೇ ಪ್ರಾಗ್ ಭಾವ ಆಕಾರವು. ಅಂದರೆ ಕಾರ್ಯ ಉತ್ಪತ್ತಿ ಪೂರ್ವದಲ್ಲಿರುವ ಅಭಾವವೇ ಪ್ರಾಗ್ ಭಾವವು. ೨) ಸಾದಿಯಾಗೆ ಅನಂತವಾಗಿರುವದೇ ಪ್ರಧ್ವಂಸಾಭಾವವು ( ಘಟೋಧ್ವಸ್ತಃ ಘಟವು ಧ್ವಂಸ (ನಾಶ) ವಾಯಿತು ಎಂಬಲ್ಲಿ ಪ್ರಧ್ವಂಸಾಭಾವವಿದೆ. ಈ ಪ್ರಧ್ವಂಸವು ಸಾದಿ ( ಅಂದರೆ ಹುಟ್ಟುತ್ತದೆ ) ಅಂದರೆ ಘಟವು ಧ್ವಂಸವಾದ ಮೇಲೆ ಧ್ವಂಸವು ಹುಟ್ಟಿತು ಆದರೆ ಅನಂತರ ಅದು (ಧ್ವಂಸವು) ಅನಂತವಾಗಿ ಇರುತ್ತದೆ ಅದಕ್ಕೆ ಪುನಃ ನಾಶವಿಲ್ಲ.
೩) ತ್ರೈಕಾಲಿಕ ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕಾತ್ಯಂತಾಭಾವಃ ( ಮೂರು ಕಾಲದಲ್ಲಿ ಯಾವ ಪದಾರ್ಥ ಸಂಬಂಧವೇ ಭೂತಲಕ್ಕೆ ಇಲ್ಲವೋ ಆ ಪದಾರ್ಥದ ಅಭಾವವೇ ಅತ್ಯಂತಾಭಾವವು ಯಥಾ :- ಭೂತಲದಲ್ಲಿ ಘಟವು ಇಲ್ಲ ಎಂಬಲ್ಲಿ ( ಭೂತಲದಲ್ಲಿ ಮೂರು ಕಾಲದಲ್ಲಿ ಘಟ ಸಂಸರ್ಗ ಸಂಬಂಧವಿಲ್ಲವೆಂದೇ ಅರ್ಥವು , ಈ ಘಟದ

ಅಭಾವವೇ ಅತ್ಯಂತಾಭಾವವು. ೪) ಯಾವ ಎರಡು ಪದಾರ್ಥಗಳಿಗೆ ತಾದಾತ್ಮ್ಯ ಸಂಬಂಧವಿಲ್ಲವೋ ಆ ಅಭಾವವೇ ಅನ್ಯೋನ್ಯಾಭಾವವು ( ಅಂದರೆ ಭೇದವು) ಘಟ ಪಟಗಳಿಗೆ ತಾದಾತ್ಮ್ಯ ಇಲ್ಲ(ಅಭೇದವು ಇಲ್ಲ) ಅಂದರೆ ಘಟ ಪಟಗಳಿಗೆ ಭೇದವಿದೆ ಎಂಬುವದೇ ಆಗಿದೆ. ಈ ಅಭಾವಕ್ಕೆ ಅನ್ಯೋನ್ಯಾಭಾವವೆಂದು ಕರೆಯುತ್ತಾರೆ. ಉದಾ: - ಘಟಃ ಪಟೋನಭವತೀತಿ ಘಟವು ಪಟವು ಅಲ್ಲ ಅಂದರೆ ಘಟ ಪಟಗಳಿಗೆ ಭೇದವಿದೆ ಎಂದೇ ಅರ್ಥವಾಗುತ್ತದೆ. ಇದೇ ಅನ್ಯೋನ್ಯಾಭಾವವು. ಈ ಪ್ರಕಾರ ಸರ್ವ ಪದಾರ್ಥಗಳು ಪೂರ್ವದಲ್ಲಿ ಹೇಳಿದ ಪ್ರಕಾರವೇ ಅಂತರ್ಭಾವವನ್ನು ಹೊಂದುವದರಿಂದ ಏಳೇ ಪದಾರ್ಥಗಳೆಂದು ಸಿದ್ಧವಾಗುತ್ತದೆ.

**ಕಣಾದನ್ಯಾಯ ಮತಯೋಃ ಬಾಲ ವ್ಯುತ್ಪತ್ತಿ ಸಿದ್ಧಯೇ**
**ಅನ್ನಂಭಟ್ಟೇನ ವಿದುಷಾರಚಿತಃ ತರ್ಕ ಸಂಗ್ರಹ ಃ**

ಪ್ರಾತಃಸ್ಮರಣೀಯ
ಶ್ರೀ ಜಗದ್ಗುರು ಶ್ರೀ ೧೦೦೮ ಶ್ರೀ ಸತ್ಯಧ್ಯಾನತೀರ್ಥ
ಶ್ರೀಪಾದಂಗಳವರ ಪರಮ ಶಿಷ್ಯರಾದ ಪೂಜ್ಯ ಹುಲಗಿ ಹುಚ್ಚಾಚಾರ್ಯ
ಶಿಷ್ಯ ವಾದಿರಾಜಾಚಾರ್ಯ ಕೃತ ತರ್ಕ ಸಂಗ್ರಹ
ಬಾಲಬೋಧಿನೀ ಕನ್ನಡ ವ್ಯಾಖ್ಯಾನವು ಸಮಾಪ್ತವಾಯಿತು.

**ಶ್ರೀ ಮಧ್ವೇಶಾರ್ಪಣ ಮಸ್ತು**







ಗ್ರಂಥ ಕರ್ತೃರಾದ ವಾದಿರಾಜಾಚಾರ್ಯ ಅಗ್ನಿಹೋತ್ರಿ
ಇವರ ವಿದ್ಯಾಗುರುಗಳಾದ ಪೂಜ್ಯ
**ಪಂಡಿತ ರತ್ನ ಹುಚ್ಚಾಚಾರ್ಯ ಹುಲಗಿ**

## ಕೃತಜ್ಞತೆಗಳು

**ಈ** ಗ್ರಂಥ ಪುಷ್ಪವನ್ನು ನಮ್ಮ ಗುರುಗಳಲ್ಲಿ ಭಕ್ತಿಪೂರ್ವಕ ಕೃತಾರ್ಥನಾಗುತ್ತೇನೆ .

## ಇವರಿಂದಲೇ ರಚಿತವಾದ ಇತರ ಗ್ರಂಥಗಳು

| | | |
|---|---|---|
| ೧. | ಪ್ರಮಾಣ ಸಂಗ್ರಹಃ<br>( ಮೂಲ ಸಂಸ್ಕೃತ ಕನ್ನಡ ಅನುವಾದ ) | ರೂ. ೪೦-೦೦ |
| ೨. | ಪ್ರಮೇಯ ಸಂಗ್ರಹ<br>( ಸಂಸ್ಕೃತ ಕನ್ನಡ ವ್ಯಾಖ್ಯಾನ ) | ರೂ. ೩೦-೦೦ |
| ೩. | ಲಘುರಾಮಾಯಣ<br>( ಕನ್ನಡ ವ್ಯಾಖ್ಯಾನ ) | ರೂ. ೬-೦೦ |
| ೪. | ಈಶಾನುಸ್ತುತಿ ಖಂಡನೆ | ರೂ. ೬-೦೦ |
| ೫. | ವಾಯುತತ್ತ್ವವೈಭವಂ | ರೂ. ೬-೦೦ |
| ೬. | ವಾಯುತತ್ತ್ವಪ್ರಕಾಶಃ<br>( ಸಂಸ್ಕೃತ ) | ರೂ. ೧೦-೦೦ |
| ೭. | ವೈಭವಾರ್ಥಪ್ರಕಾಶ | ರೂ. ೧೦-೦೦ |
| ೮. | ತರ್ಕ ಸಂಗ್ರಹಃ<br>( [illegible] ) | ರೂ. [illegible]-೦೦ |



ಪುಸ್ತಕ ದೊರೆಯುವ ಸ್ಥಳ :

**ಪಂ. ವಾದಿರಾಜಾಚಾರ್ಯ ಅಗ್ನಿಹೋತ್ರಿ**
'ವಿಜಯ ಪ್ರಸಾದ'
ಬ್ರಹ್ಮಪೂರ, ಗುಲಬರ್ಗಾ-೫೮೫೧೦೩
ದೂರವಾಣಿ : ೪೧೭೮೯

---

ಗಣೇಶ ಪ್ರಿಂಟರ್ಸ್, ಬಿ-೧೩, ಕೈಗಾರಿಕಾ ವಸಾಹತು, ಜೇವರ್ಗಿ ರಸ್ತೆ, ಗುಲಬರ್ಗಾ.

ಅಭಾವವೇ ಅತ್ಯಂತಾಭಾವವು.  ೪) ಯಾವ ಎರಡು ಪದಾರ್ಥಗಳಿಗೆ ತಾದಾತ್ಮ್ಯ ಸಂಬಂಧವಿಲ್ಲವೋ ಆ ಅಭಾವವೇ ಅನ್ಯೋನ್ಯಾಭಾವವು ( ಅಂದರೆ ಭೇದವು) ಘಟ ಪಟಗಳಿಗೆ ತಾದಾತ್ಮ್ಯ ಇಲ್ಲ ( ಅಭೇದವು ಇಲ್ಲ) ಅಂದರೆ ಘಟ ಪಟಗಳಿಗೆ ಭೇದವಿದೆ ಎಂಬುವದೇ ಆಗಿದೆ. ಈ ಅಭಾವಕ್ಕೆ ಅನ್ಯೋನ್ಯಾಭಾವವೆಂದು ಕರೆಯುತ್ತಾರೆ. ಉದಾ: - ಘಟಃ ಪಟೋನಭವತೀತಿ ಘಟವು ಪಟವು ಅಲ್ಲ ಅಂದರೆ ಘಟ ಪಟಗಳಿಗೆ ಭೇದವಿದೆ ಎಂದೇ ಅರ್ಥವಾಗುತ್ತದೆ. ಇದೇ ಅನ್ಯೋನ್ಯಾಭಾವವು. ಈ ಪ್ರಕಾರ ಸರ್ವ ಪದಾರ್ಥಗಳು ಪೂರ್ವದಲ್ಲಿ ಹೇಳಿದ ಪ್ರಕಾರವೇ ಅಂತರ್ಭಾವವನ್ನು ಹೊಂದುವದರಿಂದ ಏಳೇ ಪದಾರ್ಥಗಳೆಂದು ಸಿದ್ಧವಾಗುತ್ತದೆ.

**ಕಣಾದನ್ಯಾಯ ಮತಯೋಃ ಬಾಲ ವ್ಯುತ್ಪತ್ತಿ ಸಿದ್ಧಯೇ**
**ಅನ್ನಂಭಟ್ಟೇನ ವಿದುಷಾರಚಿತಃ ತರ್ಕ ಸಂಗ್ರಹಃ**

ಪ್ರಾತಃ ಸ್ಮರಣೀಯ
ಶ್ರೀ ಜಗದ್ಗುರು ಶ್ರೀ ೧೦೦೮ ಶ್ರೀ ಸತ್ಯಧ್ಯಾನತೀರ್ಥ
ಶ್ರೀಪಾದಂಗಳವರ ಪರಮ ಶಿಷ್ಯರಾದ ಪೂಜ್ಯ ಹುಲಗಿ ಹುಚ್ಚಾಚಾರ್ಯ
ಶಿಷ್ಯ ವಾದಿರಾಜಾಚಾರ್ಯ ಕೃತ ತರ್ಕ ಸಂಗ್ರಹ
ಬಾಲಬೋಧಿನೀ ಕನ್ನಡ ವ್ಯಾಖ್ಯಾನವು ಸಮಾಪ್ತವಾಯಿತು.

**ಶ್ರೀ ಮಧ್ವೇಶಾರ್ಪಣ ಮಸ್ತು**







ಗ್ರಂಥ ಕರ್ತೃರಾದ ವಾದಿರಾಜಾಚಾರ್ಯ ಅಗ್ನಿಹೋತ್ರಿ
ಇವರ ವಿದ್ಯಾಗುರುಗಳಾದ ಪೂಜ್ಯ
**ಪಂಡಿತ ರತ್ನ ಹುಚ್ಚಾಚಾರ್ಯ ಹುಲಗಿ**


**ಕೃತಜ್ಞತೆಗಳು**

ಈ ಗ್ರಂಥ ಪುಷ್ಪವನ್ನು ನಮ್ಮ ಗುರುಗಳಲ್ಲಿ ಭಕ್ತಿಪೂರ್ವಕ ಕೃತಾರ್ಥನಾಗುತ್ತೇನೆ .